ಈ ಪ್ರಕರಣದ ದಾಖಲಾತಿಗಳನ್ನು ಅವಲೋಕಿಸಲಾಗಿ ಪ್ರಥಮ ಮಾಹಿತಿ ವರದಿ ಮತ್ತು ಮಹಜರನಲ್ಲಿ ಆರೋಪಿಯು ಪರಾರಿಯಾಗಿರುವುದಾಗಿ ಮೊಕದ್ದಮೆಯನ್ನು ದಾಖಲಿಸಿ, ಸುಮಾರು (5) ತಿಂಗಳಿಗೂ ಹೆಚ್ಚು ಕಾಲ ಕಳೆದಿರುತ್ತದೆ. ಇಂತಹ ಪ್ರಕರಣದಲ್ಲಿ ಕಲಂ 43(ಸಿ)ರ ಅಡಿಯಲ್ಲಿ ಮೊಕದ್ದಮೆ ದಾಖಲಾದ ದಿನದಿಂದ ಒಂದು ತಿಂಗಳೊಳಗಾಗಿ ವಾಹನ ಮತ್ತು ಮಾದಕ ದ್ರವ್ಯಗಳು ತನ್ನದೆಂದು ಮಾಲೀಕತ್ವ ನಿರೂಪಿಸಲು ಯಾರೊಬ್ಬರೂ ಮುಂದೆ ಬಾರದಿದ್ದ ಪಕ್ಷದಲ್ಲಿ ಅಂತಹ ವಾಹನ ಮತ್ತು ಮಾದಕ ದ್ರವ್ಯಗಳನ್ನು ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕಾನೂನಿನಲ್ಲಿ ಅವಕಾಶವಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (5) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ:ಡಿಟಿಸಿಆರ್/19/2010–11, ದಿನಾಂಕ:25–01–2011**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ನಿರೀಕ್ಷಕರು, ಹುಣಸೂರು ವಲಯ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:03/2010–11, ದಿನಾಂಕ:28–07–2010 ರಂದು ವಶಪಡಿಸಿಕೊಂಡ ಕೆಎ–09/ಎಚ್–1339 ನೋಂದಣಿ ಸಂಖ್ಯೆಯ **ಬಜಾಜ್ ಚೇತಕ್** ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2011 ನೇ ಇಸವಿ ಜನವರಿ ತಿಂಗಳ 25ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಖ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ.ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಹಾಗೂ ಅಧಿಕೃತ ಅಧಿಕಾರಿಗಳು
ಮೈಸೂರು ಜಿಲ್ಲೆ, ಮೈಸೂರು.

ಪಿಆರ್–185

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**
**ಸಂಖ್ಯೆ:ಡಿಟಿಸಿಆರ್: 54 (ಪೋಲೀಸ್)/2010–11, ದಿನಾಂಕ:25ನೇ ಜನವರಿ, 2011**

**ಉಪಸ್ಥಿತರು:** ಡಾ॥ ವೈ.ಮಂಜುನಾಥ್, ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ / ಆರೋಪಿ** |
|---|---|---|
| ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ, ಮೈಸೂರು ಜಿಲ್ಲೆ | | ಮಹೇಶ್ ಬಿನ್ ಬಸವರಾಜು ಅಂತರಸಂತೆ, ಹೆಚ್.ಡಿ.ಕೋಟೆ ತಾಲ್ಲೂಕು |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:14–09–2010 ರಂದು ಮಧ್ಯಾಹ್ನ 3–45 ಗಂಟೆ ಸಮಯದಲ್ಲಿ ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಮೈಸೂರು ಜಿಲ್ಲೆಯ ಆರಕ್ಷಕ ನಿರೀಕ್ಷಕರು ಇವರು ಹೆಚ್.ಡಿ.ಕೋಟೆ ತಾಲ್ಲೂಕು, ಅಂತರಸಂತೆ ಗ್ರಾಮ, ಅಂತರಸಂತೆ ಹುಣಸೆಕುಪ್ಪೆ ರಸ್ತೆಯಲ್ಲಿರುವ ತಾರಕ ಉಪ ಚಾನಲ್ ಸೇತುವೆ ಬಳಿ **ಕೆಎ–45/ಇ–6679 ನೋಂದಣಿ ಸಂಖ್ಯೆಯ ಹೀರೋ ಹೋಂಡಾ ಮೋಟಾರ್ ಸೈಕಲ್** ವಾಹನದಲ್ಲಿ 25.920 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಆರೋಪಿಯಾದ ಮಹೇಶ ಬಿನ್ ಬಸವರಾಜು ಇವರನ್ನು ದಸ್ತಗಿರಿ ಮಾಡಿರುವುದಾಗಿ ಠಾಣಾ ಮೊಕದ್ದಮೆ ಸಂಖ್ಯೆ:51/2010ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32, 34ರ ರೀತ್ಯಾ ಮೊಕದ್ದಮೆ ದಾಖಲಿಸಿ, ಜಪ್ತುಪಡಿಸಲಾದ ವಾಹನ ಮತ್ತು ಮದ್ಯವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ:15–09–10ರಲ್ಲಿ ಈ ಪ್ರಾಧಿಕಾರದ ಅನುಮತಿಗಾಗಿ ಕೋರಿರುತ್ತಾರೆ. ಅದರಂತೆ ಹೆಚ್.ಡಿ.ಕೋಟೆ ವಲಯದ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ಲಭ್ಯವಿರುವ ದಾಖಲೆಗಳಂತೆ, ದಿನಾಂಕ:14–09–2010 ರಂದು ಅಂತರಸಂತೆ ಗ್ರಾಮ, ಅಂತರಸಂತೆ ಹುಣಸೆಕುಪ್ಪೆ ರಸ್ತೆಯಲ್ಲಿರುವ ತಾರಕ ಉಪ ಚಾನಲ್ ಸೇತುವೆ ಮೇಲೆ **ಕೆಎ–45/ಇ–6679 ನೋಂದಣಿ ಸಂಖ್ಯೆಯ ಹೀರೋ ಹೋಂಡಾ ಮೋಟಾರ್ ಸೈಕಲ್** ವಾಹನದಲ್ಲಿ 25.920 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿಯಾದ ಮಹೇಶ ಬಿನ್ ಬಸವರಾಜು ಎಂಬುವರನ್ನು ಸ್ಥಳದಲ್ಲಿ ದಸ್ತಗಿರಿ ಮಾಡಲಾಗಿರುತ್ತದೆ. ಈ ಬಗ್ಗೆ ಅರ್ಜಿದಾರರ ಮೇಲೆ ಕಲಂ 43(ಬಿ)(2)ರ ಅಡಿಯಲ್ಲಿ ಕಾನೂನಿನಲ್ಲಿ ವಿವಿಧ

ಜವಾಬ್ದಾರಿಗಳಿದ್ದು, ಅದನ್ನು ನಿರ್ವಹಿಸುವ ಆದ್ಯ ಕರ್ತವ್ಯ ಅರ್ಜಿದಾರರ ಮೇಲಿದ್ದು, ಈ ಕಾರಣದಿಂದಾಗಿ ಆತ ನೇರವಾಗಿ ಈ ಪ್ರಕರಣದಲ್ಲಿ ಭಾಗಿಯಾಗಿಲ್ಲದಿದ್ದರೂ ಕೂಡಾ ಪರೋಕ್ಷವಾಗಿ ಆತನೇ ಹೊಣೆಗಾರನಾಗಿರುತ್ತಾನೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (4) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತಮ್ಮ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮಿಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ:ಡಿಟಿಸಿಆರ್/54(ಪೋಲೀಸ್/2010–11, ದಿನಾಂಕ:25–01–2011**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ)(2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಮೈಸೂರು ಜಿಲ್ಲೆ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:51/2010, ದಿನಾಂಕ:14–09–2010 ರಂದು ವಶಪಡಿಸಿಕೊಂಡ **ಕೆಎ–45/ಇ–6679 ನೋಂದಣಿ ಸಂಖ್ಯೆಯ ಹೀರೋ ಹೋಂಡಾ ಮೋಟಾರ್ ಸೈಕಲ್** ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2011 ನೇ ಇಸವಿ ಜನವರಿ ತಿಂಗಳ 25ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ.ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಹಾಗೂ ಅಧಿಕೃತ ಅಧಿಕಾರಿಗಳು
ಮೈಸೂರು ಜಿಲ್ಲೆ, ಮೈಸೂರು.

ಪಿಆರ್–191

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**
**ಸಂಖ್ಯೆ:ಡಿಟಿಸಿಆರ್/468/2009–10, ದಿನಾಂಕ:25ನೇ ಜನವರಿ, 2011**

**ಉಪಸ್ಥಿತರು:** ಡಾ॥ ವೈ.ಮಂಜುನಾಥ್, ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು
ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ / ಆರೋಪಿ** |
|---|---|---|
| ಅಬಕಾರಿ ಉಪ ನಿರೀಕ್ಷಕರು, ಹುಣಸೂರು ಉಪ ವಿಭಾಗ, ಹುಣಸೂರು | | ರಮೇಶ್ ಬಿನ್ ಲೇ॥ ಬಾಲಕೃಷ್ಣ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 02–05–2010ರಂದು ರಾತ್ರಿ 9–00 ಗಂಟೆ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು, ಹುಣಸೂರು ಉಪ ವಿಭಾಗ ಇವರು ಕೆ.ಆರ್.ನಗರ ತಾಲ್ಲೂಕು, ಡಿ.ಕೆ.ಕೊಪ್ಪಲು ಗೇಟ್ ಬಳಿ ಕೆಎ–45/ಇ–4120 ನೋಂದಣಿ ಸಂಖ್ಯೆಯ **ಹಿರೋ ಹೊಂಡಾ ಸ್ಪ್ಲೆಂಡರ್** ವಾಹನದಲ್ಲಿ ಅಕ್ರಮವಾಗಿ 17,280 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಆರೋಪಿಯಾದ ರಮೇಶ್ ಬಿನ್ ಲೇ॥ ಬಾಲಕೃಷ್ಣ ಎಂಬುವವರನ್ನು ದಸ್ತಗಿರಿ ಮಾಡಿರುವುದಾಗಿ ಪ್ರಥಮ ಮಾಹಿತಿ ವರದಿ ಸಂಖ್ಯೆ:15/2009–10ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14ರ ರೀತ್ಯಾ ಅಪರಾಧವಾಗಿದ್ದು, ಕಲಂ 32, 38(ಎ), 43ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆ ದಾಖಲಿಸಿ, ಪ್ರಥಮ ಮಾಹಿತಿ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಶಪಡಿಸಿಕೊಂಡ ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯನ್ನು ಕೋರಿ, ಹುಣಸೂರು ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಈ ಪ್ರಾಧಿಕಾರದಿಂದ ದಿನಾಂಕ:19–07–2010ರಂದು ಪತ್ರ ಬರೆಯಲಾಗಿದ್ದು, ಇದುವರೆವಿಗೂ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:02–05–2010 ರಂದು ಕೆ.ಆರ್.ನಗರ ತಾಲ್ಲೂಕು ಡಿ.ಕೆ.ಕೊಪ್ಪಲು ಗೇಟ್ ಬಳಿ ಕೆಎ–45/ಇ–4120 ನೋಂದಣಿ ಸಂಖ್ಯೆಯ **ಹಿರೋ ಹೊಂಡಾ ಸ್ಪ್ಲೆಂಡರ್** ವಾಹನದಲ್ಲಿ ಅಕ್ರಮವಾಗಿ 17.280 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಬಗ್ಗೆ ಆರೋಪಿಯಾಗಲಿ ಹಾಗೂ ಪ್ರತಿವಾದಿಯಾಗಲಿ ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು

ಪ್ರಾಧಿಕಾರದ ಮುಂದೆ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (7) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ:ಡಿಟಿಸಿಆರ್/468/2009–10, ದಿನಾಂಕ:25–01–2011**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(2)(ಎ) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ನಿರೀಕ್ಷಕರು, ಹುಣಸೂರು ವಲಯ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:15/2009–10, ದಿನಾಂಕ:02–05–10 ರಂದು ವಶಪಡಿಸಿಕೊಂಡ ಕೆಎ–45/ಇ–4120 ನೋಂದಣಿ ಸಂಖ್ಯೆಯ **ಹಿರೋ ಹೊಂಡಾ ಸ್ಲೆಂಡರ್** ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2011 ನೇ ಇಸವಿ ಜನವರಿ ತಿಂಗಳ 25ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಖ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ.ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಹಾಗೂ ಅಧಿಕೃತ ಅಧಿಕಾರಿಗಳು
ಮೈಸೂರು ಜಿಲ್ಲೆ, ಮೈಸೂರು.

ಪಿಆರ್–192

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**
**ಸಂಖ್ಯೆ:ಡಿಟಿಸಿಆರ್/08/2010–11, ದಿನಾಂಕ:25ನೇ ಜನವರಿ, 2011**

**ಉಪಸ್ಥಿತರು:** ಡಾ॥ ವೈ.ಮಂಜುನಾಥ್, ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು
ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ / ಆರೋಪಿ** |
|---|---|---|
| ಅಬಕಾರಿ ನಿರೀಕ್ಷಕರು, ಹುಣಸೂರು ವಲಯ, ಹುಣಸೂರು | | ಆರೋಪಿ ಪರಾರಿ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:12–07–2010ರಂದು ರಾತ್ರಿ 8–30 ಗಂಟೆ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ಹುಣಸೂರು ವಲಯ ಇವರು ಹುಣಸೂರು ತಾಲ್ಲೂಕು ಹನಗೋಡು ಹೋಬಳಿ, ಕಿರಂಗೂರು ಗ್ರಾಮದ ಮುಖ್ಯ ರಸ್ತೆಯ, ಬಳಿ ಕೆಎ–12/ಎಂ–1981 ನೋಂದಣಿ ಸಂಖ್ಯೆಯ **ಮಾರುತಿ ಒಮ್ನಿ** ವಾಹನದಲ್ಲಿ ಅಕ್ರಮವಾಗಿ 103.680 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಆರೋಪಿ ಪರಾರಿಯಾಗಿರುವುದಾಗಿ ಪ್ರಥಮ ಮಾಹಿತಿ ವರದಿ ಸಂಖ್ಯೆ:01/2010–11ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14ರ ರೀತ್ಯಾ ಅಪರಾಧವಾಗಿದ್ದು, ಕಲಂ 32, 38(ಎ), 43ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆ ದಾಖಲಿಸಿ, ಪ್ರಥಮ ಮಾಹಿತಿ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ12–07–2010 ರಂದು ಹುಣಸೂರು ತಾಲ್ಲೂಕು ಹನಗೋಡು ಹೋಬಳಿ, ಕಿರಂಗೂರು ಗ್ರಾಮದ ಮುಖ್ಯ ರಸ್ತೆಯ, ಬಳಿ ಕೆಎ–12/ಎಂ–1981 ನೋಂದಣಿ ಸಂಖ್ಯೆಯ **ಮಾರುತಿ ಒಮ್ನಿ** ವಾಹನದಲ್ಲಿ ಅಕ್ರಮವಾಗಿ 103.680 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಬಗ್ಗೆ ಆರೋಪಿಯಾಗಲಿ ಹಾಗೂ ಪ್ರತಿವಾದಿಯಾಗಲಿ ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಈ ಪ್ರಕರಣದ ದಾಖಲಾತಿಗಳನ್ನು ಅವಲೋಕಿಸಲಾಗಿ ಪ್ರಥಮ ಮಾಹಿತಿ ವರದಿ ಮತ್ತು ಮಹಜರನಲ್ಲಿ ಆರೋಪಿಯು ಪರಾರಿಯಾಗಿರುವುದಾಗಿ ಮೊಕದ್ದಮೆಯನ್ನು ದಾಖಲಿಸಿ, ಸುಮಾರು (5) ತಿಂಗಳಿಗೂ ಹೆಚ್ಚು ಕಾಲ ಕಳೆದಿರುತ್ತದೆ. ಇಂತಹ ಪ್ರಕರಣಗಳಲ್ಲಿ ಕಲಂ 43(ಸಿ)ರ ಅಡಿಯಲ್ಲಿ ಮೊಕದ್ದಮೆ ದಾಖಲಾದ ದಿನದಿಂದ ಒಂದು ತಿಂಗಳೊಳಗಾಗಿ ವಾಹನ ಮತ್ತು ಮಾದಕ ದ್ರವ್ಯಗಳು ತನ್ನದೆಂದು ಮಾಲೀಕತ್ವ

ನಿರೂಪಿಸಲು ಯಾರೊಬ್ಬರೂ ಮುಂದೆ ಬಾರದಿದ್ದ ಪಕ್ಷದಲ್ಲಿ ಅಂತಹ ವಾಹನ ಮತ್ತು ಮಾದಕ ದ್ರವ್ಯಗಳನ್ನು ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕಾನೂನಿನಲ್ಲಿ ಅವಕಾಶವಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (5) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತಮ್ಮ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ:ಡಿಟಿಸಿಆರ್/08/2010–11, ದಿನಾಂಕ:25–01–2011**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ನಿರೀಕ್ಷಕರು, ಹುಣಸೂರು ವಲಯ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:01/2010–11, ದಿನಾಂಕ:12–07–10 ರಂದು ವಶಪಡಿಸಿಕೊಂಡ ಕೆಎ–12/ಎಂ–1981 ನೋಂದಣಿ ಸಂಖ್ಯೆಯ **ಮಾರುತಿ ಒಮ್ನಿ** ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2011 ನೇ ಇಸವಿ ಜನವರಿ ತಿಂಗಳ 25ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಖ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ.ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಹಾಗೂ ಅಧಿಕೃತ ಅಧಿಕಾರಿಗಳು
ಮೈಸೂರು ಜಿಲ್ಲೆ, ಮೈಸೂರು.

ಪಿಆರ್–193

**ಮಾರಾಟಾಧಿಕಾರಿ ನಿ, 441 ಹಾಗೂ ಸಹಕಾರ ಅಭಿವೃದ್ಧಿ ಅಧಿಕಾರಿಗಳ ಕಾರ್ಯಾಲಯ ಹೊನ್ನಾಳಿ ದಾವಣಗೆರೆ ಜಿಲ್ಲೆ, ದಾವಣಗೆರೆ**

**ಆದೇಶ**

**ಸಅಅಹೊ/ವಸೂಲಾತಿ/ಜಪ್ತಿ/ /2010–11, ದಿನಾಂಕ:11–01–2011**

**ವಿಷಯ:** 1960ರ ಕರ್ನಾಟಕ ಸಹಕಾರ ಸಂಘಗಳ ನಿಯಮ 38(2) (ಸಿ) ದರನ್ವಯ ದಾವಣಗೆರೆ ಜಿಲ್ಲೆ ಹೊನ್ನಾಳಿ ತಾಲ್ಲೂಕು ಚಟ್ನಹಳ್ಳಿ ಗ್ರಾಮದಲ್ಲಿರುವ ಬಾಕಿದಾರರಾದ ಚಂದ್ರಪ್ಪ ಬಿನ್ ತೋಟಪ್ಪ ಮಾಜಿ ಕಾರ್ಯದರ್ಶಿ ಹಾಗೂ ಬಿ.ಜಿ. ನಾಗರಾಜಪ್ಪ ಬಿನ್ ಹನುಮಂತಪ್ಪ ಮಾಜಿ ಅಧ್ಯಕ್ಷರು ಹಾ.ಉ.ಸ.ಸಂಘ ನಿ, ಚಟ್ನಹಳ್ಳಿ ಇವರುಗಳಿಂದ ಒಟ್ಟು ಅಸಲು ರೂ. 5,48,349/– ಹಾಗೂ ಬಡ್ಡಿ ಮತ್ತು ಇತರೆ ಸದರಿ ಸಂಘಕ್ಕೆ ಬರಬೇಕಾದ ಬಾಕಿಗೆ ಸದರಿಯವರುಗಳ ಮಾಲೀಕತ್ವದಲ್ಲಿರುವ ಆಸ್ತಿಗಳ ಜಪ್ತಿ ಕುರಿತು.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು ದಾವಣಗೆರೆ ಇವರ ತಗಾದೆ ಪತ್ರ ಫಾರಂ ನಂ2 ದಿನಾಂಕ:14–08–2009.
2) ಫಾರಂ ನಂ7ನ್ನು ನೀಡಿದ ದಿನಾಂಕ:27–12–2010

**ಪ್ರಸ್ತಾವನೆ:**

ಚಟ್ನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘದಲ್ಲಿ ಶ್ರೀ ಬಿ.ಚಂದ್ರಪ್ಪ ಕಾರ್ಯದರ್ಶಿಯಾಗಿ ಹಾಗೂ ಬಿ,ನಾಗರಾಜಪ್ಪ ಅಧ್ಯಕ್ಷರಾಗಿ ಕೆಲಸ ನಿರ್ವಹಿಸಿದ ಅವಧಿಯಲ್ಲಿ ಸಂಘದ ಕಟ್ಟಡ ನಿರ್ಮಾಣ ಕಾಮಗಾರಿಯಲ್ಲಿ ಸಂಘದವರು ಸದರಿಯವರುಗಳ ಮೇಲೆ 1959 ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 69 ರಡಿ ಅವಾರ್ಡ್ ಪಡೆದು ಸಂಘದವರು ಸದರಿ ಅವಾರ್ಡ್ ಸಂಖ್ಯೆ:4/2007–08 ದಿನಾಂಕ:12–09–2008ರ ಮೇರೆಗೆ ಹಣ ವಸೂಲು ಮಾಡಿಕೊಡಲು ಕೋರಿ 1960ರ ಕರ್ನಾಟಕ ಸಹಕಾರ ಸಂಘಗಳ ನಿಯಮಗಳ ನಿಯಮ 34(3) ರ ಪ್ರಕಾರ ಅಮಲ್ಜಾರಿ ಪ್ರಕರಣವನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿಗಳು ದಾವಣಗೆರೆ ಉಪವಿಭಾಗ ದಾವಣಗೆರೆ ಇವರು ಪ್ರಕರಣವನ್ನು ಅಮಲ್ಜಾರಿಗಾಗಿ ಈ ಕೆಳಗೆ ಸಹಿ ಮಾಡಿರುವ ನನಗೆ ವಹಿಸಿಕೊಟ್ಟಿರುತ್ತಾರೆ. ಸದರಿ ಅಮಲ್ಜಾರಿ ಪ್ರಕರಣದನ್ವಯ ಸದರಿ ಸಂಘಕ್ಕೆ ಪಾವ್ತಿಸಬೇಕಾದ ಸಂಪೂರ್ಣ ಹಣವನ್ನು ದಿನಾಂಕ:27–01–2011 ರೊಳಗಾಗಿ ಪಾವ್ತಿಸಲು ಬಾಕಿದಾರರಿಗೆ ತಿಳಿಸಿ 1960ರ ಕರ್ನಾಟಕ ಸಹಕಾರ ಸಂಘಗಳ ನಿಯಮ 38(2)(ಸಿ) ರನ್ವಯ ದಿನಾಂಕ:27–12–2010ರಂದು ನೋಟೀಸ್ ಕೊಡಲಾಗಿತ್ತು. ಸದರಿ ನೋಟೀಸ್‌ನಲ್ಲಿ ದಿನಾಂಕ:27–01–2011 ರೊಳಗಾಗಿ ಸದರಿ ಬಾಕಿದಾರರು ಸಂಪೂರ್ಣ ಬಾಕಿ ಹಣ ಪಾವತಿಸದೇ ಇದ್ದರೆ ಇವರ ಈ ಕೆಳಕಂಡ ಸ್ಥಿರಾಸ್ತಿಗಳನ್ನು ಜಪ್ತಿ ಮಾಡಲಾಗುವುದೆಂದು ತಿಳಿಸಲಾಗಿರುತ್ತದೆ. ಆದರೆ ಸದರಿಯವರಿಂದ ಸಂಘಕ್ಕೆ ಸಂಪೂರ್ಣ ಹಣ ರೂ 5,48,319/– (ಐದು ಲಕ್ಷದ ನಲವತ್ತೆಂಟು ಸಾವಿರದ ಮೂರು ನೂರಾ ನಲವತ್ತೊಂಬತ್ತು

ಮಾತ್ರ) ದಿನಾಂಕ:11–01–2011 ರಂದು ಇದ್ದಂತೆ ಹಾಗೂ ಬಡ್ಡಿ ಮತ್ತು ಇತರೆ ಖರ್ಚು ಬಾಕಿ ಇರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

1960ರ ಕರ್ನಾಟಕ ಸಹಕಾರ ಸಂಘಗಳ ನಿಯಮಗಳ ನಿಯಮ 38(2)(ಸಿ) ರನ್ವಯ ಅಧಿಕಾರವನ್ನು ಚಲಾಯಿಸಿ ಶ್ರೀ ಹೆಚ್. ತಿಮ್ಮಪ್ಪ, ಸಹಕಾರ ಅಭಿವೃದ್ಧಿ ಅಧಿಕಾರಿ ಹೊನ್ನಾಳಿ ಹಾಗೂ ಮಾರಾಟಾಧಿಕಾರಿ ಆದ ನಾನು ಬಾಕಿದಾರರಾದ ಶ್ರೀ ಬಿ.ಚಂದ್ರಪ್ಪ ಬಿನ್ ತೋಟಪ್ಪ ಮಾಜಿ ಕಾರ್ಯದರ್ಶಿ ಇವರ ಪ್ರತ್ಯೇಕವಾಗಿ ಹಾಗೂ ಸಂಯುಕ್ತವಾಗಿ ಇರುವ ಈ ಕೆಳಕಂಡ ಸ್ಥಿರಾಸ್ತಿಗಳನ್ನು ಇಂದು ಜಪ್ತಿಮಾಡಿದ್ದೇನೆ. ಈ ಆದೇಶವನ್ನು ದಿನಾಂಕ: 11–01–2011 ರಂದು ನನ್ನ ಸ್ವಹಸ್ತ ಸಹಿಯೊಂದಿಗೆ ಹೊರಡಿಸಲಾಗಿದೆ.

**ಹೆಚ್.ತಿಮ್ಮಪ್ಪ,**

**–: ಷಡ್ಯೂಲ್ :–**

| ಕ್ರ.ಸಂ. | ತಾಲ್ಲೂಕು | ಹೋಬಳಿ | ಗ್ರಾಮ | ಆಸ್ತಿಯ ಹಕ್ಕುದಾರರ ಹೆಸರು | ಜಪ್ತಿಯಾದ ಸ್ಥಿರಾಸ್ತಿಗಳ ವಿವರ ಸರ್ವೆ ನಂಬರ್ | ಅಂದಾಜು ವಿಸ್ತೀರ್ಣ | ಭೂ ಕಂದಾಯ | ಷರಾ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 1 | ಹೊನ್ನಾಳಿ | ಬೆಳಗುತ್ತಿ | ಚಟ್ನಹಳ್ಳಿ | ಬಿ.ಚಂದ್ರಪ್ಪ ಬಿನ್ ತೋಟಪ್ಪ | 10/5 | 1–15 | | |
| | | –"– | –"– | –"– | 40/4 | 2–10 | | |
| | | –"– | –"– | –"– | 10/2ಪಿ1 | 1–00 | | |
| | | –"– | –"– | –"– | 114/4 | 1–11 | | |

**ಹೆಚ್.ತಿಮ್ಮಪ್ಪ,**
**ಮಾರಾಟಾಧಿಕಾರಿ**
ಸಹಕಾರ ಅಭಿವೃದ್ಧಿ ಅಧಿಕಾರಿ
ಹೊನ್ನಾಳಿ ದಾವಣಗೆರೆ ಜಿಲ್ಲೆ

ಪಿಆರ್–212

**ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿ ಕಾರ್ಯಾಲಯ ಬಳ್ಳಾರಿ**

**ಸಂ.ಜಿಪಕಅ/ಕಾನೂನು ಪದವೀಧರ/ಆಡಳಿತ ತರಬೇತಿ/ಸಿಆರ್–3/2010–11/237, ದಿನಾಂಕ:05–02–2011**

**ಪ್ರಕಟಣೆ**

**ವಿಷಯ:** 2010–11ನೇ ಸಾಲಿನಲ್ಲಿ ಪರಿಶಿಷ್ಟ ವರ್ಗದ ಕಾನೂನು ಪದವಿಧರರಿಗೆ ಆಡಳಿತ ನ್ಯಾಯಾಧಿಕರಣದಲ್ಲಿ ತರಬೇತಿ ನೀಡಲು ಅರ್ಜಿಗಳನ್ನು ಆಹ್ವಾನಿಸುವುದರ ಕುರಿತು.

**ಉಲ್ಲೇಖ:** 1) ಸರಕಾರದ ಆದೇಶ ಸಂಖ್ಯೆ ಎಸ್‌ಡಬ್ಲ್ಯೂಎಸ್–681/ಎಸ್‌ಡಬ್ಲ್ಯೂ–89 ಬೆಂಗಳೂರು ದಿನಾಂಕ:02–11–2009, 28–03–2001 ಮತ್ತು 28–01–2006.

2) ಕ್ರಿಯಾಯೋಜನೆ 2010–11ನೇ ತ್ರೈಮಾಸಿಕ ಕಂತು ಬಿಡುಗಡೆ.

ಬಳ್ಳಾರಿ ಜಿಲ್ಲೆಯಲ್ಲಿರುವ ಪರಿಶಿಷ್ಟ ವರ್ಗಕ್ಕೆ ಸೇರಿರುವ ಕಾನೂನು ಪದವೀಧರರಿಗೆ 2010–11ನೇ ಸಾಲಿಗೆ ಆಡಳಿತ ನ್ಯಾಯಾಧಿಕರಣದಲ್ಲಿ 4 ವರ್ಷಗಳ ತರಬೇತಿಯನ್ನು ನೀಡುವ ಸಲುವಾಗಿ ಅರ್ಹ ಪರಿಶಿಷ್ಟ ವರ್ಗದ ಅಭ್ಯರ್ಥಿಗಳಿಂದ ನಿಗಧಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಈ ತರಬೇತಿಯನ್ನು ಪಡೆಯಲು ಇಚ್ಛಿಸುವ ಪರಿಶಿಷ್ಟ ವರ್ಗದ ಅಭ್ಯರ್ಥಿಗಳು ಈ ಕೆಳಕಂಡ ಅರ್ಹತೆಯನ್ನು ಕಡ್ಡಾಯವಾಗಿ ಹೊಂದಿರತಕ್ಕದ್ದು.

1. ಅಭ್ಯರ್ಥಿಗಳು ಪರಿಶಿಷ್ಟ ವರ್ಗಕ್ಕೆ ಸೇರಿದವರಾಗಿರಬೇಕು.
2. ಬಳ್ಳಾರಿ ಜಿಲ್ಲೆಗೆ ಮಾತ್ರ ಸಂಬಂಧಿಸಿದ ಹಾಗೂ ವಕೀಲ ವೃತ್ತಿ ನಡೆಸಲು ಅರ್ಹತೆಯುಳ್ಳ ಕಾನೂನು ಪದವೀಧರರು ಮಾತ್ರ ಈ ತರಬೇತಿಗೆ ಅರ್ಹರು.
3. ಅರ್ಜಿಗಳನ್ನು ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕದಂದು (2) ವರ್ಷದೊಳಗೆ ಕಾನೂನು ಪದವಿಯನ್ನು ಪಡೆದಿರಬೇಕು ಅರ್ಜಿಯೊಂದಿಗೆ ಕಾನೂನು ಪಧವಿಯ (3) ವರ್ಷದ ಅಂಕಪಟ್ಟಿ ಪ್ರತಿ ಲಗತ್ತಿಸಬೇಕು.

4. ಅಭ್ಯರ್ಥಿಯ ವಯಸ್ಸು, ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕದಂದು 35 ವರ್ಷಗಳನ್ನು ಮೀರಿರಬಾರದು ಈ ಕುರಿತು ಅಧಿಕೃತ ಪ್ರಮಾಣ ಪತ್ರ (SSLC) ಅಂಕಪಟ್ಟಿ ಲಗತ್ತಿಸಬೇಕು.
5. ತರಬೇತಿಗಾಗಿ ಅರ್ಜಿಯನ್ನು ಸಲ್ಲಿಸುವ ಅಭ್ಯರ್ಥಿಗಳು ಅರ್ಜಿಗಳನ್ನು ದ್ವಿಪತ್ರಿಗಳಲ್ಲಿ ನಿಗಧಿಪಡಿಸಿರುವ ಕೊನೆಯ ದಿನಾಂಕದೊಳಗೆ ಎಲ್ಲಾ ಪರೀಕ್ಷೆಗಳ ಅಂಕಪಟ್ಟಿಗಳ ಜೆರಾಕ್ಸ್ ಮತ್ತು ಜಾತಿ ಪ್ರಮಾಣ ಪತ್ರ ಬಾರ್ ಕೌನ್ಸಿಲ್‌ನಲ್ಲಿ ನೊಂದಣಿ ಮಾಡಿದ ಪ್ರಮಾಣ ಪತ್ರದ ದೃಢಿಕೃತ ಪ್ರತಿಯೊಂದಿಗೆ ಸಲ್ಲಿಸಬೇಕು.
6. ಈಗಾಗಲೇ ಕಾನೂನು ವಿಷಯದಲ್ಲಿ ಯಾವುದಾದರು ತರಬೇತಿ ಪಡೆದಿರಬಾರದು.

**ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು:-**

1. ಈ ತರಬೇತಿಗೆ ಪರಿಶಿಷ್ಟ ವರ್ಗದ (12) ಅಭ್ಯರ್ಥಿಗಳನ್ನು ಮಾತ್ರ ಆಯ್ಕೆ ಮಾಡಲಾಗುವುದು.
2. ಆಯ್ಕೆಯಾದ ಅಭ್ಯರ್ಥಿಗಳಿಗೆ (4) ವರ್ಷಗಳ ನ್ಯಾಯಾಂಗ ಆಡಳಿತ ತರಬೇತಿಯನ್ನು ಸರ್ಕಾರಿ ವಕೀಲರು, ಪಬ್ಲಿಕ್ ಪ್ರಾಸಿಕ್ಯೂಟರ್ ಅಥವಾ 20 ವರ್ಷಗಳ ಅನುಭವ ಹೊಂದಿರುವ ಹಿರಿಯ ವಕೀಲರಲ್ಲಿ ತರಬೇತಿಯನ್ನು ನೀಡಲಾಗುವುದು ಈ ವಿಷಯದ ಬಗ್ಗೆ ಆಯ್ಕೆ ಸಮಿತಿಯ ತೀರ್ಮಾನವೇ ಅಂತಿಮವಾದದ್ದು.
3. ಆಯ್ಕೆಯಾದ ಅಭ್ಯರ್ಥಿಗಳಿಗೆ ಮಾಹೆಯಾನ ರೂ.1,000 (ರೂಪಾಯಿ ಒಂದು ಸಾವಿರ ಮಾತ್ರ) 4 ವರ್ಷದವರೆಗೆ ಸ್ಟೈಪೆಂಡ್ ನೀಡಲಾಗುವುದು.
4. ಈ ತರಬೇತಿಗೆ ಅಭ್ಯರ್ಥಿಗಳನ್ನು ಮಾನ್ಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್ ಬಳ್ಳಾರಿ ಇವರ ಅಧ್ಯಕ್ಷತೆಯಲ್ಲಿ ರಚಿತವಾದ ಜಿಲ್ಲಾ ಮಟ್ಟದ ಆಯ್ಕೆ ಸಮಿತಿಯ ಸಂದರ್ಶನದ ಮೂಲಕ ಆಯ್ಕೆ ಮಾಡಲಾಗುವುದು.
5. ಆಯ್ಕೆಯಾದ ಅಭ್ಯರ್ಥಿಗಳು ತರಬೇತಿಯನ್ನು ಮಧ್ಯದಲ್ಲಿ ಬಿಟ್ಟು ಹೋಗಬಾರದು (ಕೇಂದ್ರ/ರಾಜ್ಯ ಸರ್ಕಾರದಲ್ಲಿ ಉದ್ಯೋಗ ದೊರೆತ ಅಭ್ಯರ್ಥಿಗಳಿಗೆ ಈ ನಿಬಂಧನೆ ಅನ್ವಯಿಸುವುದಿಲ್ಲ.
6. ಆಯ್ಕೆಯಾದ ಅಭ್ಯರ್ಥಿಗಳು ಸುಳ್ಳು ಮಾಹಿತಿ ದಾಖಲಾತಿ ಒದಗಿಸಿದಲ್ಲಿ ಅಂತಹವರನ್ನು ಕಾನೂನು ಶಿಸ್ತಿನ ಕ್ರಮಕ್ಕೆ ಒಳಪಡಿಸಲಾಗುವುದು ಹಾಗೂ ತರಬೇತಿಯನ್ನು ಮದ್ಯದಲ್ಲಿ ಬಿಟ್ಟುಹೋದಲ್ಲಿ ಅಂತಹವರಿಗೆ ನೀಡಿದ ಸ್ಟೈಪಂಡ್ ಹಣವನ್ನು ಶೇ 10% ರಷ್ಟು ಬಡ್ಡಿ ಸೇರಿಸಿ, ಭೂ ಕಂದಾಯ ಬಾಕಿ ಎಂದು ಪರಿಗಣಿಸಿ, ವಸೂಲಿ ಮಾಡಲಾಗುವುದು. ಈ ಬಗ್ಗೆ ಆಯ್ಕೆಯಾದ ಅಭ್ಯರ್ಥಿಗಳು ಕರಾರು ಪತ್ರವನ್ನು ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳು ಬಳ್ಳಾರಿ ಇವರಿಗೆ ಕರಾರು ಬರೆದು ಕೊಡತಕ್ಕದ್ದು.
7. ಸಂದರ್ಶನದಲ್ಲಿ ಆಯ್ಕೆಯಾದ ಅಭ್ಯರ್ಥಿಗಳಿಗೆ ಮಾತ್ರ ಈ ಕಛೇರಿಯಿಂದ ತಿಳಿಸಲಾಗುವುದು ಹಾಗೂ ತರಬೇತಿ ಪಡೆಯಲು ಆಯ್ಕೆಯಾದ ಅಭ್ಯರ್ಥಿಗಳು ಆಯ್ಕೆ ಪತ್ರ ತಲುಪಿದ 15 ದಿನಗಳೊಳಗಾಗಿ ತಮ್ಮ ಒಪ್ಪಿಗೆ ಪತ್ರವನ್ನು ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳು ಬಳ್ಳಾರಿ ಇವರಿಗೆ ಸಲ್ಲಿಸತಕ್ಕದ್ದು.
8. ಈ ಎಲ್ಲಾ ಷರತ್ತುಗಳಿಗೆ ರೂ.20/-ಛಾಪ ಕಾಗದದಲ್ಲಿ ಒಪ್ಪಿಗೆ ಪ್ರಮಾಣ ಪತ್ರ ನೀಡಬೇಕು.
9. ಅಭ್ಯರ್ಥಿಯು ಪ್ರತಿ ತಿಂಗಳು ತರಬೇತಿಗೆ ವರದಿ ಮಾಡಿಕೊಂಡು ನ್ಯಾಯವಾದಿಗಳಿಂದ ತರಬೇತಿಗೆ ಹಾಜರಾದ ಬಗ್ಗೆ ಹಾಜರಿ ಪ್ರಮಾಣ ಪತ್ರವನ್ನು ಹಾಗೂ ದಿನಚರಿಯನ್ನು ಸಂಬಂಧ ಪಟ್ಟ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಗೆ ಪ್ರತಿ ತಿಂಗಳು 5ನೇ ತಾರೀಖಿನೊಳಗೆ ಕಳುಹಿಸಬೇಕು ಕಳುಹಿಸದೆ ಇದ್ದಲ್ಲಿ ಆ ತಿಂಗಳ ಸ್ಟೈಪಂಡ್ ನೀಡಲಾಗುವುದಿಲ್ಲ.
10. ಪೂರ್ಣಮಾಡಿದ ಅರ್ಜಿಗಳನ್ನು (ದ್ವಿ ಪ್ರತಿಗಳಲ್ಲಿ) ಕಾರ್ಯದರ್ಶಿಗಳು ಜಿಲ್ಲಾ ಮಟ್ಟದ ನ್ಯಾಯಾಂಗ ತರಬೇತಿ ಆಯ್ಕೆ ಸಮಿತಿ ಮತ್ತು ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳು ಬಳ್ಳಾರಿ ಇವರಿಗೆ ದಿನಾಂಕ:14-02-2011 ರಂದು ಸಾಯಂಕಾಲ 5-30 ಗಂಟೆಯೊಳಗೆ ನೇರವಾಗಿ ಅಥವಾ ಆಯಾ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಮುಖಾಂತರ ಸಲ್ಲಿಸತಕ್ಕದ್ದು.

**ಶ್ರೀ ಸಿ. ಪೊಲಯ್ಯ**
ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳು
ಹಾಗೂ ಸದಸ್ಯ ಮತ್ತು ಕಾರ್ಯದರ್ಶಿ, ಕಾನೂನು
ಪದವೀಧರ ನ್ಯಾಯಾಂಗ ಆಡಳಿತ ತರಬೇತಿ
ಆಯ್ಕೆ ಸಮಿತಿ ಬಳ್ಳಾರಿ

ಪಿಆರ್-221

**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ**

**ಸಂಖ್ಯೆ:ಸಂವ್ಯಶಾಇ 8 ಭಾನಿವಿ 2011, ಬೆಂಗಳೂರು ದಿನಾಂಕ:01-03-2011**

**ಅಧಿಸೂಚನೆ**

**ವಿಷಯ:** ಭಾಷಾಂತರ ನಿರ್ದೇಶನಾಲಯದ ಗ್ರೂಪ್-ಎ ಅಧಿಕಾರಿಗಳ ಜೇಷ್ಠತಾ ಪಟ್ಟಿಯನ್ನು ದಿನಾಂಕ:01-01-2011ರಲ್ಲಿರುವಂತೆ ಪ್ರಕಟಿಸುವ ಬಗ್ಗೆ.

**ಉಲ್ಲೇಖ:** ಭಾಷಾಂತರ ನಿರ್ದೇಶಕರ ಪತ್ರ ಸಂಖ್ಯೆ:ಭಾನಿ 16/ಆಡಳಿತ/ಗ್ರೂಪ್ ಎ/ಜ್ಯೇಷ/2011, ದಿನಾಂಕ:02-02-2011.

ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತಾ) ನಿಯಮಗಳು, 1957ರ 10ನೇ ನಿಯಮದ (1)ನೇ ಉಪ–ನಿಯಮದನ್ವಯ ಭಾಷಾಂತರ ನಿರ್ದೇಶನಾಲಯದ ಗ್ರೂಪ್–ಎ ಅಧಿಕಾರಿಗಳ ಜೇಷ್ಠತಾ ಪಟ್ಟಿಯನ್ನು ದಿನಾಂಕ:01–01–2011ರಲ್ಲಿರುವಂತೆ ಅನುಬಂಧದಲ್ಲಿ ಲಗತ್ತಿಸಿ ಪ್ರಕಟಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರಿಚಾರ್ಡ್ ಲೋಬೊ,**
ಜಂಟಿ ಪ್ರಾರೂಪಕಾರ ಮತ್ತು ಪದನಿಮಿತ್ತ,
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

**ಅನುಬಂಧ**

**ದಿನಾಂಕ:1–1–2011 ರಲ್ಲಿ ಇರುವಂತೆ ಭಾಷಾಂತರ ನಿರ್ದೇಶನಾಲಯದ ಗ್ರೂಪ್–ಎ ಅಧಿಕಾರಿಗಳ ಜ್ಯೇಷ್ಠತಾ ಪಟ್ಟಿ**

| ಕ್ರ ಸಂ. | ಅಧಿಕಾರಿಗಳ ಹೆಸರು | ನೇರ/ ನೇಮಕಾತಿ/ ಮುಂಬಡ್ತಿ ಇತರೆ | ಮೀಸಲಾತಿ/ ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ/ ಜ್ಯೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| **ಗ್ರೂಪ್–ಎ ಭಾಷಾಂತರ ನಿರ್ದೇಶಕರು (ರೂ. 20025–525–22650–600–26250–675–28275)** | | | | | | | |
| 1. | ಡಾ॥ ಕೆ.ಎಸ್. ಗೀತಾ | ಮುಂಬಡ್ತಿ | ಸಾಮಾನ್ಯ | 23–10–1951 | 01–05–1975 | 03–04–2010 | 03–04–2010 |
| **ಉಪ ನಿರ್ದೇಶಕರು (ರೂ. 18150–450–19500–525–22650–600–26250–675–26925)** | | | | | | | |
| 1. | ಎಂ. ಜೈಕುಮಾರ್ | ಮುಂಬಡ್ತಿ | ಸಾಮಾನ್ಯ | 22–02–1951 | 14–10–1974 | 20–03–2003 | 20–03–2003 |
| 2. | ರತ್ನಕುಮಾರಿ | ಮುಂಬಡ್ತಿ | ಪರಿಶಿಷ್ಟ ಜಾತಿ | 08–10–1951 | 12–12–1974 | 11–10–2005 | 11–10–2005 |
| 3. | ದೇವರಾಜು | ಮುಂಬಡ್ತಿ | ಪರಿಶಿಷ್ಟ ಜಾತಿ | 06–04–1952 | 08–12–1983 | 13–12–2010 | 13–12–2010 |
| **ಸಹಾಯಕ ನಿರ್ದೇಶಕರು (ರೂ. 14050–350–14400–400–16800–450–19500–525–22650–600–25050)** | | | | | | | |
| 5. | ವೆಂಕಟಾಚಲಪತಿ | ಮುಂಬಡ್ತಿ | ಸಾಮಾನ್ಯ | 04–04–1952 | 23–10–1974 | 11–10–2006 | 11–10–2006 |
| 6 | ಶೋಭಾ ಎಂ.ಕಟ್ಟಿ | ಮುಂಬಡ್ತಿ | ಸಾಮಾನ್ಯ | 27–07–1954 | 15–06–1983 | 18–06–2008 | 18–06–2008 |
| 7 | ವೀರಭದ್ರಸ್ವಾಮಿ | ಮುಂಬಡ್ತಿ | ಪರಿಶಿಷ್ಟ ಜಾತಿ | 15–07–1954 | 07–12–1983 | 18–06–2008 | 18–06–2008 |
| 8 | ಐ.ಎಂ. ಕಂಬಳಿ | ಮುಂಬಡ್ತಿ | ಸಾಮಾನ್ಯ | 05–08–1958 | 14–06–1983 | 18–06–2008 | 18–06–2008 |
| 9. | ಜಿ. ಮಹದೇವ್ | ಮುಂಬಡ್ತಿ | ಸಾಮಾನ್ಯ | 17–05–1955 | 12–12–1983 | 08–09–2010 | 08–09–2010 |
| 10. | ಎಸ್.ಎಸ್. ಪರಮೇಶ್ | ಮುಂಬಡ್ತಿ | ಸಾಮಾನ್ಯ | 20–04–1952 | 14–12–1983 | 13–12–2010 | 13–12–2010 |
| **ಆಡಳಿತಾಧಿಕಾರಿ (ರೂ. 14050–350–14400–400–16800–450–19500–525–22650–600–25050)** | | | | | | | |
| 11. | ಬೈಲರಂಗಯ್ಯ | ಮುಂಬಡ್ತಿ | ಪರಿಶಿಷ್ಟ ಜಾತಿ | 04–03–1952 | 08–08–1977 | 04–12–2009 | 04–12–2009 |

**ರಿಚಾರ್ಡ್ ಲೋಬೊ,**
ಜಂಟಿ ಪ್ರಾರೂಪಕಾರ ಮತ್ತು ಪದನಿಮಿತ್ತ,
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

ಪಿಆರ್–302

## ಸಹಕಾರ ಇಲಾಖೆ

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ ದಾವಣಗೆರೆ ಉಪ ವಿಭಾಗ ಆಂಜನೇಯ ದೇವಸ್ಥಾನದ ಎದುರು, ವಿದ್ಯಾನಗರ ದಾವಣಗೆರೆ**

**ನಂ.ಎ.ಆರ್.31/ದಾವಾ/ಅಮಲ್ಜಾರಿ/ಇ.ಪಿ. 69/2001–02, ದಿನಾಂಕ:21–02–2011**

**ವಿಷಯ:** ಬಾಪೂಜಿ ಕೋ–ಆಪರೇಟಿವ್ ಬ್ಯಾಂಕ್ ನಿಯಮಿತ, ದಾವಣಗೆರೆ ಇದರ ಸುಸ್ತಿ ಸಾಲಗಾರರಾದ ಮೆ॥ನಾಡಿಗ್ ರೈಸ್ ಇಂಡಸ್ಟ್ರೀಸ್ ಅಂಡ್ ರೈಸ್ ಮಿಲ್ ಸರ್ವೆ ನಂ.85/1 ಬಿ. ಖಾತೆ ನಂ.505 ಅಳತೆ 2 ಎಕರೆ, 8 ಗುಂಟೆ, ಲೋಕಿಕೆರೆ ರಸ್ತೆ ಶಿರಮಗೊಂಡನಹಳ್ಳಿ ದಾವಣಗೆರೆ ತಾಲ್ಲೂಕು ಇದರ ಸ್ಥಿರಾಸ್ತಿ ಮಾರಾಟವನ್ನು ಸ್ಥಿರೀಕರಿಸುವ ಬಗ್ಗೆ.

**ಉಲ್ಲೇಖ:** 1) ರಿಟ್ ಪಿಟಿಷನ್ ಸಂಖ್ಯೆ:32734/2010 (CS-RES) ದಿನಾಂಕ:20–10–2010

2) ಮಾರಾಟಾಧಿಕಾರಿಗಳು ನಿ.441 ಇವರ ಪ್ರಸ್ತಾವನೆ ದಿನಾಂಕ:03–11–2010

3) ಈ ಕಛೇರಿಯ ಪತ್ರ ದಿನಾಂಕ:09–11–2010

4) ಶ್ರೀ ಎಂ.ಇ. ರವಿರಾಜ್ ಇವರ ಪತ್ರ ದಿನಾಂಕ:23–11–2010

5) ಬ್ಯಾಂಕಿನ ಸಲಹೆಗಾರರು ಹಾಗೂ ವಕೀಲರ ಪತ್ರ ದಿನಾಂಕ:26–11–2010

**ಪ್ರಸ್ತಾವನೆ:**

ಬಾಪೂಜಿ ಕೋ–ಆಪರೇಟಿವ್ ಬ್ಯಾಂಕ್ ಲಿ. ದಾವಣಗೆರೆ ಇದರಲ್ಲಿ ಸ್ಥಿರಾಸ್ತಿ ಆಧಾರ ಸಾಲ ರೈಸ್ ಮಿಲ್ ವ್ಯವಹಾರದ ಅಭಿವೃದ್ಧಿ ಉದ್ದೇಶಕ್ಕಾಗಿ ರೂ. 50.00 ಲಕ್ಷ ಸಾಲ ಪಡೆದು ಸುಸ್ತಿದಾರರಾದ ಮೆ.ನಾಡಿಗ್ ರೈಸ್ ಇಂಡಸ್ಟ್ರೀಸ್ ಅಂಡ್ ರೈಸ್ ಮಿಲ್ ಇದರ ಮಾಲೀಕರಾದ ಶ್ರೀ ಎನ್. ಶೇಖರಪ್ಪ ಇವರಿಗೆ ಸೇರಿದ ಸ್ಥಿರಾಸ್ತಿಯಾದ ಸರ್ವೆ ನಂ.85/1 ಬಿ.ಖಾತೆ ನಂ.505, ಅಳತೆ 2 ಎಕರೆ 8 ಗುಂಟೆ, ಲೋಕಿಕೆರೆ ರಸ್ತೆ, ಶಿರಮಗೊಂಡನಹಳ್ಳಿ ದಾವಣಗೆರೆ ತಾಲ್ಲೂಕು ಇದರ ಅಳತೆ ಪೂರ್ವಕ್ಕೆ ಲೋಕಿಕೆರೆ ದಾವಣಗೆರೆ ರಸ್ತೆ, ಪಶ್ಚಿಮಕ್ಕೆ ಶ್ರೀ ಎನ್. ಶೇಖರಪ್ಪನವರ ಆಸ್ತಿ, ಉತ್ತರಕ್ಕೆ ಶ್ರೀ ಎನ್. ಶೇಖರಪ್ಪನವರ ಆಸ್ತಿ, ದಕ್ಷಿಣಕ್ಕೆ ಚಾನಲ್ ಇದರ ಸ್ಥಿರಾಸ್ತಿಯನ್ನು ಮಾರಾಟಾಧಿಕಾರಿ ನಿಯಮ 441 ಬಾಪೂಜಿ ಕೋ–ಆಪರೇಟಿವ್ ಬ್ಯಾಂಕ್ ಲಿ. ದಾವಣಗೆರೆ ರವರು ದಾವಾ ಸಂಖ್ಯೆ/ಜೆಆರ್‌ಬಿ/ಡಿ.ಐ.ಎಸ್./2282/1999–2000 ದಿನಾಂಕ 30–03–2000 ನಂತರ ಸಾಲ ಮರುಪಾವತಿಸದೇ ಇರುವುದರಿಂದ ಬ್ಯಾಂಕಿನವರು ಅಮಲ್ಜಾರಿ ಪ್ರಕರಣ ದಾಖಲು ಮಾಡಿರುತ್ತಾರೆ. ಅಮಲ್ಜಾರಿ ಪ್ರಕರಣ ಸಂಖ್ಯೆ:69/2001–02 ಆಗಿರುತ್ತದೆ. ಸಾಲಗಾರರು ಬ್ಯಾಂಕಿಗೆ ಸಾಲದ ಬಾಕಿಯನ್ನು ಮರುಪಾವತಿಸಲು ವಿಫಲರಾದ ಪ್ರಯುಕ್ತ ಬ್ಯಾಂಕಿನ ಮಾರಾಟಾಧಿಕಾರಿಯವರು ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳನ್ವಯ ಸಾಲಗಾರನು ಬ್ಯಾಂಕಿಗೆ ಆಧಾರ ಮಾಡಿದ್ದ ಸ್ಥಿರ ಸ್ವತ್ತನ್ನು ಮಾರಾಟ ಮಾಡಲು ದಿನಾಂಕ 20–10–2010 ರಂದು ಬಹಿರಂಗ ಹರಾಜು ನಡೆಸಿರುತ್ತಾರೆ. ಈ ಬಹಿರಂಗ ಹರಾಜಿನಲ್ಲಿ ಒಟ್ಟು 22 ಜನ ಬಿಡ್‌ದಾರರು ತಲಾ ರೂ.50,000/– ಗಳಂತೆ ಹಣ ಪಾವತಿಸಿ ಭಾಗವಹಿಸಿರುತ್ತಾರೆ. ಈ ಬಹಿರಂಗ ಹರಾಜಿನಲ್ಲಿ ಬಹಿರಂಗ ಹರಾಜಿನ ಕ್ರಮಸಂಖ್ಯೆ: 11 ನೇ ಬಿಡ್ ದಾರರಾದ ಶ್ರೀ ಎಂ.ಇ. ರವಿರಾಜ್ ಬಿನ್ ಇ.ಎಂ.ಪಾಂಡಿಯನ್, ಮಹಾರಾಜ ಇಂಡಸ್ಟ್ರೀಸ್ ಲೋಕಿಕೆರೆ ರಸ್ತೆ, ದಾವಣಗೆರೆ ಇವರು ರೂ. 1,41,00,000/– (ರೂ. ಒಂದು ಕೋಟಿ ನಲ್ವತ್ತೊಂದು ಲಕ್ಷ) ಗಳಿಗೆ ಬಿಡ್ ಮಾಡಿ ಅತೀ ಹೆಚ್ಚಿನ ಮೊತ್ತದ ಬಿಡ್‌ದಾರರಾಗಿದ್ದು, ಹರಾಜಿನ ಸ್ಥಳದಲ್ಲಿಯೇ ಬಿಡ್ ಮೊತ್ತದ ಶೇಕಡಾ 15 ರಷ್ಟು ಹಣ ರೂ.21,15,000/– ಗಳನ್ನು ಬ್ಯಾಂಕಿಗೆ ಪಾವತಿ ಮಾಡಿರುತ್ತಾರೆ. ಬ್ಯಾಂಕಿನ ಮಾರಾಟಾಧಿಕಾರಿಯವರು ಸಲ್ಲಿಸಿರುವ ವರದಿಯ ಪ್ರಕಾರ ಸಾಲಗಾರರು ಬ್ಯಾಂಕಿಗೆ ದಿನಾಂಕ:20–10–2010 ಕ್ಕೆ ಮರು ರೂ.1,39,10,256–84 ಗಳು ಮತ್ತು ತದನಂತರ ಬಡ್ಡಿ ಮತ್ತು ಇತರೇ ವೆಚ್ಚವನ್ನು ಪಾವತಿಸಲು ಬಾಕಿ ಇದ್ದು, ರಿಜಿಸ್ಟರ್ಡ್ ಮೌಲ್ಯಮಾಪಕರು ಹಾಗು ಇಂಜಿನಿಯರ್‌ರಾದ ಶ್ರೀ ಹೆಚ್.ಎಸ್. ನಟರಾಜ್ ಸಿವಿಲ್ ಇಂಜಿನಿಯರ್ ಅಂಡ್ ವ್ಯಾಲ್ಯೂಯರ್ ದಾವಣಗೆರೆರವರು ಆಸ್ತಿ ಮೌಲ್ಯ ಮಾಪನ ಮಾಡಿರುತ್ತಾರೆ. ಮಾರಾಟಾಧಿಕಾರಿಯವರು ದಿನಾಂಕ:20–10–2010 ರಂದು ನಡೆಸಿದ ಹರಾಜಿನಲ್ಲಿ ಶ್ರೀ ಎಂ.ಇ.ರವಿರಾಜ್ ಬಿನ್ ಇ.ಎಂ. ಪಾಂಡಿಯನ್‌ರವರಿಗೆ ರೂ.1.41,00,000/– ಗಳಿಗೆ ಮಾರಾಟವಾಗಿರುತ್ತದೆ. ಆದುದರಿಂದ ಈ ಕಛೇರಿಗೆ ಮಾರಾಟ ಸ್ಥಿರೀಕರಣ ಮಾಡಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯಲ್ಲಿ ಎಲ್ಲಾ ದಾಖಲಾತಿಗಳನ್ನು ಸಲ್ಲಿಸಿರುತ್ತಾರೆ.

ಕರ್ನಾಟಕ ಉಚ್ಚ ನ್ಯಾಯಾಲಯ ಬೆಂಗಳೂರು ರಿಟ್ ಅರ್ಜಿ ಸಂಖ್ಯೆ 32734/2010 ರ (CS-RES) ಇವರಲ್ಲಿ ಬಿಡ್‌ನ ಸಂಬಂಧ ದಾವೆ ಹೂಡಿರುತ್ತಾರೆ. ಸದರಿ ನ್ಯಾಯಾಲಯದಿಂದ ಯಾವುದೇ ರೀತಿಯಾಗಿ ಮಧ್ಯಂತರ ಆದೇಶ ಅಥವಾ ತಡೆಯಾಜ್ಞೆ ಇರುವುದಿಲ್ಲ. ದಿನಾಂಕ:29–01–2011 ರಂದು ಪ್ರಧಾನ ವ್ಯವಸ್ಥಾಪಕರು ಪತ್ರ ಬರೆಯುತ್ತಾ, ಪತ್ರದ ಜೊತೆಯಲ್ಲಿ ತಮ್ಮ ಬ್ಯಾಂಕಿನ ಕಾನೂನು ಸಲಹೆಗಾರರ ಪತ್ರ ಲಗತ್ತಿಸಿರುತ್ತಾರೆ. ಬ್ಯಾಂಕಿನ ಕಾನೂನು ಸಲಹೆಗಾರರ ಪತ್ರದಲ್ಲಿ ಮಾರಾಟ ಸ್ಥಿರೀಕರಣ ಯಾವುದೇ ರೀತಿಯಾಗಿ ಮಧ್ಯಂತರ ಆದೇಶ ಅಥವಾ ತಡೆಯಾಜ್ಞೆ ಇರುವುದಿಲ್ಲ. ಹಾಗೂ ಯಾವುದೇ ಅಡೆ ತಡೆಗಳು ಇಲ್ಲದ ಕಾರಣ, ಸಹಕಾರ ಸಂಘಗಳ ನಿಯಮದನ್ವಯ ಮಾರಾಟ ಸ್ಥಿರೀಕರಿಸಬಹುದಾಗಿದೆ ಎಂದು ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ. ಶ್ರೀ ಎಂ.ಇ. ರವಿರಾಜ್‌ರವರು ಬಿಡ್ಡಿನ ಮೊತ್ತವನ್ನು ನಿಗದಿತ ವೇಳೆಯಲ್ಲಿ ಬ್ಯಾಂಕಿಗೆ ಪಾವತಿಸಲಾಗಿದ್ದು, ಹರಾಜು ಮಾಡಿ ಸುಮಾರು 4 ತಿಂಗಳ ಕಾಲ ವಿಳಂಬವಾಗಿದ್ದು, ಕೂಡಲೇ ಮಾರಾಟ ಸ್ಥಿರೀಕರಿಸಲು ಈ ಕಛೇರಿಗೆ ಪತ್ರ ಬರೆದು ಕೋರಿಕೊಂಡಿರುತ್ತಾರೆ. ದಿನಾಂಕ:20–10–2010 ರಿಂದ ಇದುವರೆವಿಗೂ ಕರ್ನಾಟಕ ಉಚ್ಚ ನ್ಯಾಯಾಲಯದಿಂದ ಯಾವ ಆದೇಶ ಅಥವಾ ನಿರ್ದೇಶನವಾಗಲೀ, ಈ ತಹಲ್‌ವರೆವಿಗೂ ಈ ಕಛೇರಿಗೆ ಬಂದಿರುವುದಿಲ್ಲ.

ಬ್ಯಾಂಕುಗಳು ಠೇವಣಿ ಸಂಗ್ರಹಣೆ ಮಾಡಿ, ಸಾಲ ನೀಡುವುದು ಬ್ಯಾಂಕಿನ ಉದ್ದೇಶದಲ್ಲಿದ್ದು, ಆ ಸಾಲವನ್ನು ಕಾನೂನು ರೀತ್ಯಾ ಸಾಲ ವಸೂಲಿ ಮಾಡುವುದು ಕೂಡ ಬ್ಯಾಂಕಿನ ಕರ್ತವ್ಯವಾಗಿರುತ್ತದೆ. ನಂತರ ಬ್ಯಾಂಕಿನವರು ಠೇವಣಿದಾರರಿಗೆ ನಿಗದಿತ ಸಮಯದಲ್ಲಿ ವಾಪಾಸ್ಸು ಮಾಡುವುದು ಶಾಸನ ಬದ್ಧವಾಗಿರುತ್ತದೆ. ಅದಲ್ಲದೇ, ಭಾರತೀಯ ರಿಜರ್ವ್ ಬ್ಯಾಂಕಿನ ನಿಯಮಾನುಸಾರ, ಸುಸ್ತಿ ಸಾಲಗಳ ಎನ್‌ಪಿಪಿಯಾಗಿ, ಬ್ಯಾಂಕಿನ ಅಡಾವು ಪತ್ರಿಕೆಯಲ್ಲಿ ಅಳವಡಿಸಿಕೊಳ್ಳುವುದರಿಂದ ಆ ಬ್ಯಾಂಕು ನಷ್ಟ ಅನುಭವಿಸಿದಂತೆಯಾಗುತ್ತದೆ. ಈ ಹಿನ್ನಲೆಯಲ್ಲಿ ಬ್ಯಾಂಕಿನ ಸಾಲದ ವಸೂಲಾತಿಯ ಹಿತದೃಷ್ಟಿಯಿಂದ ಠೇವಣಿದಾರರ ಹಿತದೃಷ್ಟಿಯಿಂದ ಮಾರಾಟ ಸ್ಥಿರೀಕರಣ ಮಾಡುವುದು ಅತ್ಯಗತ್ಯವಾಗಿರುತ್ತದೆ. ಇದರಿಂದಾಗಿ ಬ್ಯಾಂಕಿನಲ್ಲಿ ಸುಸ್ತಿ ಸಾಲಗಾರರ ಸಂಖ್ಯೆ

ಕಡಿಮೆಯಾಗಿ, ಬ್ಯಾಂಕಿನ ಆರ್ಥಿಕ ಮಟ್ಟ ಹೆಚ್ಚಲು ಅನುಕೂಲವಾಗುತ್ತೆಂದು ಅಭಿಪ್ರಾಯ ಪಟ್ಟು ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯದ ಮೇಲ್ಕಂಡ ರಿಟ್ ಪಿಟಿಷನ್ ಸಂ: 32734/2010 ರ ಆದೇಶಕ್ಕೆ ಒಳಪಟ್ಟು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಜಿ. ಮಲ್ಲಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹಾಗೂ ವಸೂಲಾಧಿಕಾರಿಗಳು ದಾವಣಗೆರೆ ಉಪ ವಿಭಾಗ, ದಾವಣಗೆರೆ, ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38(6)ಎ(7) ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಅಮಲ್ಜಾರಿ ಅರ್ಜಿ ಸಂ:69/2001–02 ರಲ್ಲಿ ಮೆ: ನಾಡಿಗ್ ರೈಸ್ ಇಂಡಸ್ಟ್ರೀಸ್ ಅಂಡ್ ರೈಸ್ ಮಿಲ್ ಇದರ ಮಾಲೀಕರಾದ ಶ್ರೀ ಎನ್. ಶೇಖರಪ್ಪ ಇವರಿಗೆ ಸೇರಿದ ಸ್ಥಿರಾಸ್ತಿ ಸರ್ವೆ ನಂ: 85/1ಬಿ ಖಾತೆ ಸಂ:505 ಅಳತೆ 2 ಎಕರೆ 8 ಗುಂಟೆ ಲೋಕಿಕೆರೆ ರಸ್ತೆ ಶಿರಮಗೊಂಡನಹಳ್ಳಿ, ದಾವಣಗೆರೆ ತಾಲ್ಲೂಕು ಇದರ ಅಳತೆ ಪೂರ್ವಕ್ಕೆ ಲೋಕಿಕೆರೆ ದಾವಣಗೆರೆ ರಸ್ತೆ, ಪಶ್ಚಿಮಕ್ಕೆ ಶ್ರೀ ಎನ್. ಶೇಖರಪ್ಪನವರ ಆಸ್ತಿ, ಉತ್ತರಕ್ಕೆ ಶ್ರೀ ಎನ್. ಶೇಖರಪ್ಪನವರ ಆಸ್ತಿ, ದಕ್ಷಿಣಕ್ಕೆ ಚಾನಲ್ ಇದರ ಸ್ಥಿರಾಸ್ತಿಯನ್ನು ದಿನಾಂಕ:20–10–2010 ರಂದು ವಾದಿ ಬ್ಯಾಂಕಿನ ಮಾರಾಟಾಧಿಕಾರಿಯವರು ಮಾಡಿದ ಬಹಿರಂಗ ಹರಾಜಿನಲ್ಲಿ ಶ್ರೀ ಎಂ.ಇ. ರವಿರಾಜ್ ಬಿನ್ ಇ.ಎಂ. ಪಾಂಡಿಯನ್ ಮಹಾರಾಜ ಇಂಡಸ್ಟ್ರೀಸ್ ಲೋಕಿಕೆರೆ ರಸ್ತೆ, ದಾವಣಗೆರೆ ಇವರು ಅತಿ ಹೆಚ್ಚಿನ ಬಿಡ್ಡುದಾರರಾಗಿದ್ದು, ಇವರಿಗೆ ರೂ. 1,41,00,000–00 (ರೂ. ಒಂದು ಕೋಟಿ ನಲವತ್ತೊಂದು ಲಕ್ಷ) ಗಳಿಗೆ ಈ ಕೆಳಗೆ ವಿವರಿಸಿದ ಸ್ಥಿರಾಸ್ತಿಯನ್ನು ಬಹಿರಂಗವಾಗಿ ಹರಾಜು ಮೂಲಕ ಮಾರಾಟ ಮಾಡಿರುವುದನ್ನು ಸ್ಥಿರೀಕರಿಸಿರುತ್ತೇನೆ.

**ಸ್ಥಿರಾಸ್ತಿಯ ವಿವರ**

ದಾವಣಗೆರೆ ಮಹಾನಗರ ಪಾಲಿಕೆಯ ವಿಭಾಗಕ್ಕೆ ಸೇರಿದ ಮೆ: ನಾಡಿಗ್ ರೈಸ್ ಇಂಡಸ್ಟ್ರೀಸ್ ಅಂಡ್ ರೈಸ್ ಮಿಲ್ ಇದರ ಮಾಲೀಕರಾದ ಶ್ರೀ ಎನ್. ಶೇಖರಪ್ಪ ಇವರಿಗೆ ಸೇರಿದ ಸ್ಥಿರಾಸ್ತಿ ಸರ್ವೆ ನಂ: 85/1ಬಿ ಖಾತೆ ಸಂ:505 ಅಳತೆ 2 ಎಕರೆ 8 ಗುಂಟೆ ಲೋಕಿಕೆರೆ ರಸ್ತೆ ಶಿರಮಗೊಂಡನಹಳ್ಳಿ, ದಾವಣಗೆರೆ ತಾಲ್ಲೂಕು ಇದರ ಅಳತೆವುಳ್ಳ ಸ್ವತ್ತಿಗೆ ಚಕ್ಕು ಬಂದಿ:

ಪೂರ್ವಕ್ಕೆ :– ಲೋಕಿಕೆರೆ ದಾವಣಗೆರೆ ರಸ್ತೆ,

ಪಶ್ಚಿಮಕ್ಕೆ :– ಶ್ರೀ ಎನ್. ಶೇಖರಪ್ಪನವರ ಆಸ್ತಿ,

ಉತ್ತರಕ್ಕೆ :– ಶ್ರೀ ಎನ್. ಶೇಖರಪ್ಪನವರ ಆಸ್ತಿ,

ದಕ್ಷಿಣಕ್ಕೆ :– ಚಾನಲ್

ಈ ಮೇಲ್ಕಂಡ ಅಳತೆ ಮತ್ತು ಚಕ್ಕುಬಂದಿಗಳ ಪಟ್ಟಿ ಸ್ವತ್ತು ಈ ಮಾರಾಟದ ಕ್ರಯಕ್ಕೆ ಒಳಪಟ್ಟಿರುತ್ತೆ.

ಸೇಲ್ ಸರ್ಟಿಫಿಕೇಟ್‌ನ್ನು ಜಾರಿ ಮಾಡುವ ಸಂಬಂಧವಾಗಿ ಖರೀದಿದಾರರು ಹರಾಜಿನ ಮೊತ್ತಕ್ಕೆ ಅವಶ್ಯವಿರುವ ಸ್ಟಾಂಪ್ ಪೇಪರ್‌ನ್ನು ಖರೀದಿಸಿ, ಈ ಆದೇಶ ತಲುಪಿದ 15 ದಿನಗಳೊಳಗಾಗಿ ಈ ಕೆಳ ಸಹಿ ಮಾಡಿರುವವರ ಸಮ್ಮುಖದಲ್ಲಿ ಹಾಜರುಪಡಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವಹಸ್ತ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ದಿನಾಂಕ:21–02–2011 ರಂದು ಹೊರಡಿಸಲಾಗಿದೆ.

**ಜಿ. ಮಲ್ಲಪ್ಪ**
ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಹಾಗೂ ವಸೂಲಾಧಿಕಾರಿಗಳು ದಾವಣಗೆರೆ ಉಪ ವಿಭಾಗ, ದಾವಣಗೆರೆ

ಪಿಆರ್–312

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರ ಕಾರ್ಯಾಲಯ, ಕುವೆಂಪು ರಸ್ತೆ, ಕೆನರಾ ಬ್ಯಾಂಕ್ ಎದುರು, ಶಿವಮೊಗ್ಗ**

**ವಿಷಯ:** ರತನ್ ಕ್ರಾಫ್ಟ್ ಅಂಡ್ ಇಂಡಸ್ಟ್ರಿಯಲ್ ಕೋ ಆಪರೇಟಿವ್ ಸೊಸೈಟಿ ನಿ., ಕಾರ್ಗಲ್ ಸಾಗರ ತಾಲ್ಲೂಕು ಇದನ್ನು ಸಮಾಪನೆಗೊಳಿಸುವ ಬಗ್ಗೆ

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ, ರವರ ಪತ್ರ ನಂ:ಎಆರ್–25/ಎಲ್‌ಕ್ಯೂಡಿ/ಸಿಆರ್/2010–11/ ದಿನಾಂಕ:28–01–2011.

2) ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ/201/ಸಿಎಲ್‌ಎಂ/2008 ಬೆಂಗಳೂರು ದಿನಾಂಕ:27–05–2010.

**ಪ್ರಸ್ತಾವನೆ:**

ನಿಷ್ಕ್ರಿಯಗೊಂಡಿರುವ, ರತನ್ ಕ್ರಾಫ್ಟ್ ಅಂಡ್ ಇಂಡಸ್ಟ್ರಿಯಲ್ ಕೋ ಆಪರೇಟಿವ್ ಸೊಸೈಟಿ ನಿ., ಕಾರ್ಗಲ್ ಸಾಗರ ತಾಲ್ಲೂಕು ಈ ಸಹಕಾರ ಸಂಘವನ್ನು ಸಮಾಪನೆಗೊಳಿಸಲು ಉಲ್ಲೇಖ(1)ರ ಪತ್ರದಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಸಂಘವು ನೊಂದಣಿ ಸಂ:ಎಆರ್–25/3124/ 1974–75 ದಿನಾಂಕ:16–02–1975 ರಂದು ನೊಂದಣಿಯಾಗಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ವ್ಯಾಪ್ತಿಯನ್ನು ಹೊಂದಿರುತ್ತದೆ.

ಸಂಘದ ಉಪನಿಯಮದ ಉದ್ದೇಶವನ್ನು ಕಾರ್ಯರೂಪಕ್ಕೆ ತಂದು ಕಾರ್ಯನಿರ್ವಹಿಸದೆ 2 ವರ್ಷದಿಂದ ಯಾವುದೇ ವ್ಯವಹಾರ ನಿರ್ವಹಿಸದೆ ಸ್ಥಗಿತಗೊಂಡ ಹಿನ್ನಲೆಯಲ್ಲಿ ಸಂಘದ ಆಡಳಿತ ಮಂಡಳಿಯನ್ನು ರದ್ದುಪಡಿಸಿ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಕ ಮಾಡಲಾಗಿತ್ತು. ಆಡಳಿತಾಧಿಕಾರಿಗಳು ಪ್ರಭಾರ ಪಡೆದು ಆಡಳಿತಾಧಿಕಾರಿ ದಿನಾಂಕ:06–09–2010 ರಂದು ಆಡಳಿತಾಧಿಕಾರಿ ಸಭೆ ನಡೆಸಿ, ಸಂಘದ ಆಡಳಿತ ಮಂಡಳಿ

ರಚಿಸಿಕೊಂಡು ಸಂಘವನ್ನು ಮುನ್ನೆಡೆಸಿಕೊಂಡು ಹೋಗಲು ಯಾವುದೇ ಸದಸ್ಯರಲ್ಲಿ ಆಸಕ್ತಿ ಇಲ್ಲದೆ ಇರುವುದರಿಂದ ಸಂಘವನ್ನು ಸಮಾಪನೆಗೊಳಿಸಲು ತೀರ್ಮಾನಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ–ವಿಭಾಗ, ಸಾಗರ,ರವರು ಆಡಳಿತಾಧಿಕಾರಿಯವರ ತೀರ್ಮಾನವನ್ನು ಅನುಮೋದಿಸಿ ಉಲ್ಲೇಖ(1)ರ ಪತ್ರದಲ್ಲಿ ಸಮಾಪನೆಗೊಳಿಸಲು ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ, ಪರಿಗಣಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸಂ:ಡಿಆರ್‌ಎಸ್‌ಎಲ್‌ಕ್ಯೂಡಿ/ಡಿಎಲ್‌ಎಸ್/ಸಿಆರ್–/2010–11/1760 ದಿನಾಂಕ:03–02–2011**

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(2) ಅನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂ:ಸಿಐ/201/ಸಿಎಲ್‌ಎಂ 2008 ಬೆಂಗಳೂರು ದಿನಾಂಕ:27–05–2010 ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಸಿ.ಎನ್.ದೇವರಾಜು ಕೆ.ಸಿ.ಎಸ್. ಸಹಕಾರ ಸಂಘಗಳ ಉಪ–ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ರತನ್ ಕ್ರಾಫ್ಟ್ ಅಂಡ್ ಇಂಡಸ್ಟ್ರಿಯಲ್ ಕೋ ಆಪರೇಟಿವ್ ಸೊಸೈಟಿ ನಿ., ಕಾರ್ಗಲ್ ಸಾಗರ ತಾಲ್ಲೂಕು ಈ ಸಂಘವನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73(1) ರಂತೆ ಎಂ. ಚಂದ್ರಶೇಖರ್ ಸಹಬೋಧಕರು ರತನ್ ಕ್ರಾಫ್ಟ್ ಬಿದಿರು ಬೆತ್ತದ ವಿಭಾಗ, ಕುಶಲ ಕರ್ಮಿಗಳ ತರಬೇತಿ ಸಂಸ್ಥೆ ಸಾಗರ, ಇವರನ್ನು ಸಮಾಪನೆ ಅಧಿಕಾರಿಯಾಗಿ ನೇಮಕ ಮಾಡಿರುತ್ತೇನೆ.

ಸಮಾಪನಾಧಿಕಾರಿಗಳು ಕೂಡಲೇ ಸಂಘದ ಪ್ರಭಾರವನ್ನು ಪಡೆದು ಸಮಾಪನಾ ಪ್ರಕ್ರಿಯೆಯನ್ನು ಪೂರ್ಣಗೊಳಿಸಿ, ಸಂಘದ ನೊಂದಣಿ ಕ್ರಮಾಂಕವನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ:03–02–2011 ರಂದು ನೀಡಲಾಗಿದೆ.

**ಸಿ.ಎನ್. ದೇವರಾಜು,**
ಸಹಕಾರ ಸಂಘಗಳ ಉಪ ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿಆರ್–258

## ಕರ್ನಾಟಕ ಲೋಕಸೇವಾ ಆಯೋಗ

**ವಿಷಯ:** 2010ನೇ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ದುರಾಚಾರ ಎಸಗಿರುವ ಪ್ರಕರಣಕ್ಕೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:**
1) ಮೇಲ್ವಿಚಾರಕರು ಟಿಳಕವಾಡಿ ಪ್ರೌಢಶಾಲೆ, ಬೆಳಗಾಂ, ಇವರ ಪತ್ರದ ದಿನಾಂಕ:13–06–2010.
2) ಶ್ರೀ ಅರವಿಂದ ದುರುಗಪ್ಪ ಅಂಗಡಿ ಮತ್ತು ಶ್ರೀ ಯಲ್ಲಪ್ಪ ನಾಗಪ್ಪ ಪೂಜೇರಿ ಇವರಿಗೆ ಆಯೋಗದ ನೋಟೀಸ್ ಜಾರಿ ಮಾಡಿದ ಸಂಖ್ಯೆ:ಇಪ(1)1993–97/2010–11/ಪಿಎಸ್‌ಸಿ, ದಿನಾಂಕ:25–08–2010.
3) ಶ್ರೀ ಅರವಿಂದ ದುರುಗಪ್ಪ ಅಂಗಡಿ ಮತ್ತು ಶ್ರೀ ಯಲ್ಲಪ್ಪ ನಾಗಪ್ಪ ಪೂಜೇರಿ ಇವರನ್ನು ಆಯೋಗದ ಕಛೇರಿಗೆ ಖುದ್ದಾಗಿ ಹಾಜರಾಗಲು ಜಾರಿ ಮಾಡಿದ ಹಿಂಬರಹದ ಸಂಖ್ಯೆ ವಿಚಾರಣೆ 1–3/ಆರ್.ಎನ್.ಆರ್(3)ಶಾಖೆ, ದಿನಾಂಕ:14–10–2010
4) ವಿಚಾರಣಾ ವರದಿ ದಿನಾಂಕ:15–11–2010.

**ಪ್ರಸ್ತಾವನೆ:**

2010ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಯ ಅಕೌಂಟ್ಸ್ ಹೈಯರ್ ವಿಷಯದ ಪತ್ರಿಕೆ–Iರಲ್ಲಿ ಶ್ರೀ ಅರವಿಂದ ದುರುಗಪ್ಪ ಅಂಗಡಿ ನೋಂದಣಿ ಸಂಖ್ಯೆ:40303, ಶ್ರೀ ಯಲ್ಲಪ್ಪ ನಾಗಪ್ಪ ಪೂಜೇರಿ ನೋಂದಣಿ ಸಂಖ್ಯೆ:40296 ಇವರುಗಳು ದಿನಾಂಕ:13–06–2010ರಂದು ಟಿಳಕವಾಡಿ ಪ್ರೌಢಶಾಲೆ ಬೆಳಗಾಂನಲ್ಲಿ ಪರೀಕ್ಷೆ ಬರೆಯುವಾಗ ತಮ್ಮ ಓ.ಎಂ.ಆರ್. ಉತ್ತರಪತ್ರಿಕೆಗಳನ್ನು ಅದಲು ಬದಲು ಮಾಡಿದ್ದು ಪರೀಕ್ಷಾ ಮೇಲ್ವಿಚಾರಕರು ಸುಮ್ಮನೆ ಕುಳಿತುಕೊಳ್ಳುವಂತೆ ತಿಳಿಸಿದ್ದರೂ ಪರೀಕ್ಷಾ ಕೊಠಡಿಯಲ್ಲಿ ಪರೀಕ್ಷೆಗೆ ತೊಂದರೆಯುಂಟು ಮಾಡಿರುತ್ತಾರೆ ಎಂದು ಪರೀಕ್ಷಾ ಮೇಲ್ವಿಚಾರಕರು ಉಲ್ಲೇಖ(1)ರಲ್ಲಿ ವರದಿಸಲ್ಲಿಸಿದ್ದು, ಈ ಮೇಲ್ಕಂಡ ಅಭ್ಯರ್ಥಿಗಳಿಗೆ ಉಲ್ಲೇಖ(2)ರಲ್ಲಿ ನೋಟೀಸ್ ಜಾರಿಮಾಡಿ ಸಮಜಾಯಿಷಿಯನ್ನು ಸಲ್ಲಿಸಲು ಸೂಚಿಸಲಾಗಿತ್ತು. ಅಭ್ಯರ್ಥಿಗಳು ಸಲ್ಲಿಸಿದ್ದ ಸಮಜಾಯಿಷಿ ಉತ್ತರದಲ್ಲಿ ಇವರ ವಿರುದ್ಧ ಮಾಡಲಾದ ಆರೋಪವನ್ನು ನಿರಾಕರಿಸಿದ್ದರಿಂದ ಅವರುಗಳಿಗೆ ಉಲ್ಲೇಖ(3)ರಲ್ಲಿ ವಿಚಾರಣಾಧಿಕಾರಿಯವರ ಮುಂದೆ ವಿಚಾರಣೆಗೆ ಹಾಜರಾಗಲು ತಿಳಿಸಲಾಗಿತ್ತು. ಸದರಿಯವರು ದಿನಾಂಕ:25–10–2010ರಂದು ಆಯೋಗದ ವಿಚಾರಣಾಧಿಕಾರಿಯವರ ಮುಂದೆ ಹಾಜರಾಗಿ ತಪ್ಪೊಪ್ಪಿಗೆಯ ಹೇಳಿಕೆಗಳನ್ನು ನೀಡಿರುವುದರಿಂದ ಇವರುಗಳ ಮೇಲಿನ ಆರೋಪವು ಸಾಬೀತಾಗಿದೆ ಎಂದು ವಿಚಾರಣಾಧಿಕಾರಿಯವರು ಉಲ್ಲೇಖ(4)ರಲ್ಲಿ ವರದಿಯನ್ನು ನೀಡಿದ್ದು, ಕರ್ನಾಟಕ ಲೋಕಸೇವಾ ಆಯೋಗದ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳ 1965ರನ್ವಯ ಅವರಿಗೆ ದಂಡನೆ ವಿಧಿಸುವುದು ಸೂಕ್ತವೆಂದು ಆಯೋಗವು ದಿನಾಂಕ:06–12–2010ರಂದು ತೀರ್ಮಾನಿಸಿ ಈ ಕೆಳಕಂಡ ಆದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ:ಇಪ(1) 2435–2437/2010–11/ಪಿಎಸ್‌ಸಿ, ಬೆಂಗಳೂರು ದಿನಾಂಕ:30–12–2010**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತ ಜ್ಞಾಪನಪತ್ರ ಆಡಳಿತ:398/93—94/ಪಿಎಸ್‌ಸಿ ದಿನಾಂಕ:14–07–1993ರಲ್ಲಿದ್ದಂತೆ ಪ್ರದತ್ತವಾದ ಅಧಿಕಾರದ

ಮೇರೆಗೆ ಶ್ರೀ ಅರವಿಂದ ದುರುಗಪ್ಪ ಅಂಗಡಿ, ಬೆರಳಚ್ಚುಗಾರರು, ತೋಟಗಾರಿಕೆ ಉಪನಿರ್ದೇಶಕರ ಕಛೇರಿ, ಬೆಳಗಾಂ–590001, ಹಾಗೂ ಶ್ರೀ ಯಲ್ಲಪ್ಪ ನಾಗಪ್ಪ ಪೂಜೇರಿ, ದಫೇದಾರ್, ನಗರಸಭೆ ಕಾರ್ಯಾಲಯ ಗೋಕಾಕ್, ಸಂಗೋಳ್ಳಿರಾಯಣ್ಣ ವೃತ್ತ, ಗೋಕಾಕ್–591307, ಇವರುಗಳ 2010ರ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಪಡಿಸುವುದರ ಜೊತೆಗೆ ಮುಂದಿನ ನಾಲ್ಕು ಇಲಾಖಾ ಪರೀಕ್ಷೆಗಳಿಗೆ ಕೂರದಂತೆ ಡಿಬಾರ್ ಮಾಡಲಾಗಿದೆ.

ಆಯೋಗದ ಆದೇಶದ ಮೇರೆಗೆ,

**ವಿ.ಬಿ. ಪಾಟೀಲ್,**

ಕಾರ್ಯದರ್ಶಿ ಹಾಗೂ ನಿಯಂತ್ರಕರು, ಇಲಾಖಾ ಪರೀಕ್ಷೆಗಳು

ಪಿಆರ್–17 ಕರ್ನಾಟಕ ಲೋಕಸೇವಾ ಆಯೋಗ

## ಕರ್ನಾಟಕ ಲೋಕಸೇವಾ ಆಯೋಗ

**ವಿಷಯ:** 2010ನೇ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ದುರಾಚಾರ ಎಸಗಿರುವ ಪ್ರಕರಣಕ್ಕೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:** 1) ಮೇಲ್ವಿಚಾರಕರು ಸರ್ಕಾರಿ ಬಾಲಕಿಯರ ಪದವಿ ಪೂರ್ವ ಕಾಲೇಜ್, ಬೀದರ್ ಇವರ ಪತ್ರದ ದಿನಾಂಕ:12–06–2010.

2) ಶ್ರೀ ಅಬ್ದುಲ್ ರಷೀದ್ ಬಿನ್ ಶೇಖ್ ಚಾಂದ್ ಇವರಿಗೆ ಆಯೋಗದ ನೋಟೀಸ್ ಜಾರಿ ಮಾಡಿದ ಸಂಖ್ಯೆ:ಇಪ(1) 1993–97/2010–11/ಪಿಎಸ್‌ಸಿ, ದಿನಾಂಕ:25–08–2010.

3) ಶ್ರೀ ಅಬ್ದುಲ್ ರಷೀದ್ ಬಿನ್ ಶೇಖ್ ಚಾಂದ್ ಇವರನ್ನು ಆಯೋಗದ ಕಛೇರಿಗೆ ಖುದ್ದಾಗಿ ಹಾಜರಾಗಲು ಜಾರಿ ಮಾಡಿದ ಹಿಂಬರಹದ ಸಂಖ್ಯೆ ವಿಚಾರಣೆ 1–3/ಆರ್.ಎನ್.ಆರ್(3) ಪಿ.ಎಸ್.ಸಿ. ದಿನಾಂಕ:14–10–2010.

4) ವಿಚಾರಣಾ ವರದಿ ದಿನಾಂಕ:15–11–2010.

**ಪ್ರಸ್ತಾವನೆ:**

2010ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಜನರಲ್ ಲಾ ಭಾಗ–1 ಪತ್ರಿಕೆ–2ರ ವಿಷಯದ ನೋ.ಸಂ:43092 ಶ್ರೀ ಅಬ್ದುಲ್ ರಷೀದ್ ಇವರು ದಿನಾಂಕ:12–06–2010 ರಂದು ಸರ್ಕಾರಿ ಬಾಲಕಿಯರ ಪದವಿ ಪೂರ್ವ ಕಾಲೇಜ್, ಬೀದರ್ ಕೇಂದ್ರದಲ್ಲಿ ಪರೀಕ್ಷೆ ಬರೆಯುವಾಗ ಬೇರೊಬ್ಬ ಅಭ್ಯರ್ಥಿಯ ಜೊತೆ ಎಷ್ಟುಸಲ ಹೇಳಿದರು ಮಾತನಾಡುತ್ತಿದ್ದು ಪರೀಕ್ಷಾ ಕೊಠಡಿಯಲ್ಲಿ ಅಶಾಂತಿ ವಾತಾವರಣವನ್ನುಂಟು ಮಾಡಿರುತ್ತಾರೆ ಎಂದು ಉಲ್ಲೇಖ(1)ರಲ್ಲಿ ಮೇಲ್ವಿಚಾರಕರು ವರದಿ ಸಲ್ಲಿಸಿರುತ್ತಾರೆ. ಈ ಅಭ್ಯರ್ಥಿಗೆ ಉಲ್ಲೇಖ(2)ರಲ್ಲಿ ನೋಟೀಸ್ ಜಾರಿ ಮಾಡಿ ಸಮಜಾಯಿಷಿಯನ್ನು ಸಲ್ಲಿಸಲು ಸೂಚಿಸಲಾಗಿತ್ತು. ಅದಕ್ಕೆ ಉತ್ತರವಾಗಿ ಅಭ್ಯರ್ಥಿಯು ಸಲ್ಲಿಸಿದ ಸಮಜಾಯಿಷಿ ಉತ್ತರದಲ್ಲಿ ಇವರ ವಿರುದ್ಧ ಮಾಡಲಾದ ಆರೋಪವನ್ನು ನಿರಾಕರಿಸಿದ್ದರಿಂದ ಅವರಿಗೆ ಉಲ್ಲೇಖ(3)ರಲ್ಲಿ ದಿನಾಂಕ:25–10–2010 ರಂದು ಆಯೋಗದ ವಿಚಾರಣಾಧಿಕಾರಿಯವರ ಮುಂದೆ ವಿಚಾರಣೆಗೆ ಹಾಜರಾಗಲು ತಿಳಿಸಲಾಗಿತ್ತು. ಸದರಿಯವರು ವಿಚಾರಣಾಧಿಕಾರಿಯವರ ಮುಂದೆ ದಿನಾಂಕ:25–10–2010ರಂದು ಹಾಜರಾಗಿದ್ದು, ಆ ಸಮಯದಲ್ಲಿ ಹೇಳಿದ ಹೇಳಿಕೆಯಲ್ಲಿ ತಮ್ಮಿಂದಾದ ತಪ್ಪಿಗೆ ಕ್ಷಮೆ ಯಾಚಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ವಿಚಾರಣಾಧಿಕಾರಿಯವರು ಇವರ ವಿರುದ್ಧ ಮಾಡಲಾದ ಆರೋಪವು ಸಾಬೀತಾಗಿದೆಯೆಂದು ಉಲ್ಲೇಖ(4)ರಲ್ಲಿ ವರದಿ ನೀಡಿದ್ದು, ಕರ್ನಾಟಕ ಲೋಕಸೇವಾ ಆಯೋಗದ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳ 1965ರನ್ವಯ ಅವರಿಗೆ ದಂಡನೆ ವಿಧಿಸುವುದು ಸೂಕ್ತವೆಂದು ಆಯೋಗವು ದಿನಾಂಕ:06–12–2010ರಲ್ಲಿ ನಿರ್ಣಯಿಸಿದ್ದು ಈ ಕೆಳಕಂಡ ಆದೇಶವನ್ನು ಮಾಡಿದೆ.

### ಆದೇಶ ಸಂಖ್ಯೆ:ಇಪ(1) 2435–2437/2010–11/ಪಿಎಸ್‌ಸಿ, ಬೆಂಗಳೂರು ದಿನಾಂಕ:30–12–2010

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತ ಜ್ಞಾಪನಪತ್ರ ಆಡಳಿತ:398/93—94/ಪಿಎಸ್‌ಸಿ ದಿನಾಂಕ:14–07–1993ರಲ್ಲಿದ್ದಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ಅಬ್ದುಲ್ ರಷೀದ್, ಲೈಬ್ರರಿ ಅಸಿಸ್ಟೆಂಟ್, ಸಿಟಿ ಸೆಂಟ್ರಲ್ ಲೈಬ್ರರಿ, ಎಸ್.ಬಿ.ಹೆಚ್. ಕಾಲೋನಿ, ಶಿವಾನಿ ಪಬ್ಲಿಕ್ ಸ್ಕೂಲ್ ಎದುರು, ಬೀದರ್ ಇವರಿಗೆ ರೂ. 100/– ದಂಡನೆಯನ್ನು ವಿಧಿಸಲಾಗಿದೆ.

ಆಯೋಗದ ಆದೇಶದ ಮೇರೆಗೆ,

**ವಿ.ಬಿ. ಪಾಟೀಲ್,**

ಕಾರ್ಯದರ್ಶಿ ಹಾಗೂ ನಿಯಂತ್ರಕರು, ಇಲಾಖಾ ಪರೀಕ್ಷೆಗಳು

ಪಿಆರ್–18 ಕರ್ನಾಟಕ ಲೋಕಸೇವಾ ಆಯೋಗ

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

**ವಿಷಯ:** ಅಂಬೇಡ್ಕರ್ ರಸ್ತೆ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ., ನಿ., ಕೆಜಿಎಫ್, ಬಂಗಾರಪೇಟೆ ತಾಲ್ಲೂಕು ಈ ಸಂಘದ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ

**ಉಲ್ಲೇಖ:** 1) ಈ ಕಛೇರಿಯ ಆದೇಶದ ಸಂಖ್ಯೆ ಡಿಅರ್‌ಕೆ/ಎಲ್‌ಕ್ಯೂಡಿ/ಸಿಆರ್.12/2007–08 ದಿನಾಂಕ:9–6–2008.

2) ಕಛೇರಿಯಿಂದ ನೀಡಿರುವ ಪತ್ರಿಕಾ ಪ್ರಕಟಣೆ ದಿನಾಂಕ:8–6–2010 ಪತ್ರಿಕೆಯಲ್ಲಿ ಪ್ರಕಟಗೊಂಡ ದಿನಾಂಕ:9–6–2010.

3) ಸಹಕಾರ ಅಭಿವೃದ್ಧಿ ಅಧಿಕಾರಿ, ಬಂಗಾರಪೇಟೆ ತಾಲ್ಲೂಕುರವರ ಪ್ರಸ್ತಾವೆ ದಿನಾಂಕ:9–9–2010.

**ಪ್ರಸ್ತಾವನೆ:**

ಅಂಬೇಡ್ಕರ್ ರಸ್ತೆ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ., ಕೆಜಿಎಫ್, ಬಂಗಾರಪೇಟೆ ತಾಲ್ಲೂಕು ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಇವರ ಆದೇಶ ಸಂಖ್ಯೆ: ಎಆರ್‌ಕೆ/ಬಿ/ಸಿಆರ್.44/15025/86-87 ದಿನಾಂಕ:13-11-1986 ರಂತೆ ನೋಂದಣಿಯಾಗಿರುತ್ತದೆ. ಈ ಸಹಕಾರ ಸಂಘವು ಉದ್ದೇಶಿತ ಬೈಲಾ, ಸಹಕಾರ ಸಂಘಗಳ ಕಾಯ್ದೆ ರೀತ್ಯಾ ಹಾಗೂ ಸಂಘದ ಸದಸ್ಯರ ಹಿತದೃಷ್ಟಿಯಿಂದ ಸಂಘವು ಕಾರ್ಯನಿರ್ವಹಿಸದೆ, ಕೆಲವು ವರ್ಷಗಳಿಂದ ಸ್ಥಗಿತಗೊಂಡ ಪ್ರಯುಕ್ತ ಈ ಕಛೇರಿಯ ಉಲ್ಲೇಖ (1)ರ ಆದೇಶದಲ್ಲಿ ಈ ಸಂಘವನ್ನು ಋಣಸಮಾಪನೆಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಬಂಗಾರಪೇಟೆ ಇವರನ್ನು ಸಮಾಪನಾಧಿಕಾರಿನ್ನಾಗಿ ನೇಮಿಸಲಾಗಿತ್ತು. ಸಮಾಪನಾಧಿಕಾರಿಗಳು ಸಮಾಪನಾ ಸಹಕಾರ ಸಂಘದ ಆಸ್ತಿ ಮತ್ತು ಜವಾಬ್ದಾರಿಯನ್ನು ಶೂನ್ಯಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಬಂಗಾರಪೇಟೆ ರವರು ಸಮಾಪನಾ ಸಹಕಾರ ಸಂಘದ ನೊಂದಣಿ ರದ್ಧತಿ ಮಾಡಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸಹಕಾರ ಅಭಿವೃದ್ಧಿ ಅಧಿಕಾರಿ, ಬಂಗಾರಪೇಟೆ ರವರು ಸಲ್ಲಿಸಿರುವ ಪ್ರಸ್ತಾವೆಯನ್ನು ಪರಿಶೀಲಿಸಿ, ಸಹಕಾರ ಸಂಘದ ಆಸ್ತಿ-ಜವಾಬ್ದಾರಿಗಳು ಶೂನ್ಯವಾಗಿರುವುದನ್ನು ಖಚಿತಪಡಿಸಿ, ಸಂಘದ ಸದಸ್ಯರಿಗೆ ಅಥವಾ ಸಾರ್ವಜನಿಕರಿಗೆ ಈ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಯಾವುದೇ ರೀತಿಯ ಪ್ರಯೋಜನ ಇರುವುದಿಲ್ಲವೆಂದು ಅಭಿಪ್ರಾಯಿಸಿ, ಋಣ ಸಮಾಪನಾ ಸಹಕಾರ ಸಂಘವನ್ನು ಸಹಕಾರ ಕಾಯ್ದೆ ಕಲಂ 75 ರ ರೀತ್ಯಾ ನೋಂದಣಿ ರದ್ದತಿ ಮಾಡಲು, ಸಂಘವನ್ನು ವಿಸರ್ಜಿಸಲು ಶಿಫಾರಸ್ಸು ಮಾಡಿ ಪ್ರಸ್ತಾವೆಯನ್ನು ಈ ಕಛೇರಿಗೆ ಉಲ್ಲೇಖ (3) ರಂತೆ ಸಲ್ಲಿಸಿರುತ್ತಾರೆ.

ಸಮಾಪನಾಧಿಕಾರಿಗಳು ಸಮಾಪನಾ ಸಹಕಾರ ಸಂಘದ ಸಮಾಪನಾ ಕಾರ್ಯವನ್ನು ಪೂರ್ಣಗೊಳಿಸಿರುವುದರಿಂದ ಸಹಕಾರ ಅಭಿವೃದ್ಧಿ ಅಧಿಕಾರಿ, ಬಂಗಾರಪೇಟೆ ಇವರ ಶಿಫಾರಸ್ಸಿನೊಂದಿಗೆ ಸಲ್ಲಿಸಿರುವ ಸಮಾಪನಾ ಸಹಕಾರ ಸಂಘದ ನೊಂದಣಿ ರದ್ಧತಿ ಪ್ರಸ್ತಾವನೆ ಸೂಕ್ತವಾಗಿರುವುದರಿಂದ ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

**ನಂ:ಡಿಆರ್‌ಕೆ/ಎಲ್‌ಕ್ಯೂಡಿ/ಸಿಆರ್/11/2010-11, ದಿನಾಂಕ:30ನೇ ಸೆಪ್ಟೆಂಬರ್ 2010**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ/ ಸಿಎಲ್‌ಎಂ/2001 ದಿನಾಂಕ:21-11-2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಕೆ.ಎಲ್.ನರಸಿಂಹಮೂರ್ತಿ, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಅಂಬೇಡ್ಕರ್ ರಸ್ತೆ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ., ಕೆಜಿಎಫ್, ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘದ ನೋಂದಣಿ ಸಂಖ್ಯೆ:ಎಆರ್‌ಕೆ/ಬಿ/ಸಿಆರ್.44/15025/86-87 ದಿನಾಂಕ:13-11-1986 ನ್ನು ರದ್ದುಗೊಳಿಸಿ, ಸಂಘವನ್ನು ವಿಸರ್ಜಿಸಿ ಆದೇಶಿಸಿದ್ದೇನೆ.

ಈ ಆದೇಶದ ದಿನಾಂಕದಿಂದ ಸದರಿ ಸಂಘವು ಅಸ್ತಿತ್ವದಲ್ಲಿಲ್ಲದೆ ಸಂಪೂರ್ಣವಾಗಿ ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು.

ಈ ಆದೇಶವನ್ನು ಈ ದಿನ ಅಂದರೆ, ದಿನಾಂಕ:30-09-2010 ರಂದು ನನ್ನ ಸಹಿ ಹಾಗೂ ಈ ಕಛೇರಿ ಮೊಹರಿನೊಂದಿಗೆ ಹೊರಡಿಸಿದೆ.

**ಕೆ.ಎಲ್. ನರಸಿಂಹಮೂರ್ತಿ,**
ಸಹಕಾರ ಸಂಘಗಳ ಉಪ ನಿಬಂಧಕರು.
ಕೋಲಾರ ಜಿಲ್ಲೆ, ಕೋಲಾರ.

ಪಿಆರ್-130

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**

**ವಿಷಯ:** ಬಿಇಎಂಎಲ್ ಬಳಕೆದಾರರ ಸಹಕಾರ ಸಂಘ., ನಿ., ಕೆಜಿಎಫ್, ಬಂಗಾರಪೇಟೆ ತಾಲ್ಲೂಕು ಈ ಸಂಘದ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ

**ಉಲ್ಲೇಖ:** 1) ಈ ಕಛೇರಿಯ ಆದೇಶದ ಸಂಖ್ಯೆ ಡಿಅರ್‌ಕೆ/ಎಲ್‌ಕ್ಯೂಡಿ/ಸಿಆರ್.5/2007-08 ದಿನಾಂಕ:21-2-2008.
2) ಕಛೇರಿಯಿಂದ ನೀಡಿರುವ ಪತ್ರಿಕಾ ಪ್ರಕಟಣೆ ದಿನಾಂಕ:8-6-2010 ಪತ್ರಿಕೆಯಲ್ಲಿ ಪ್ರಕಟಗೊಂಡ ದಿನಾಂಕ:9-6-2010.
3) ಸಹಕಾರ ಅಭಿವೃದ್ಧಿ ಅಧಿಕಾರಿ, ಬಂಗಾರಪೇಟೆ ತಾಲ್ಲೂಕುರವರ ಪ್ರಸ್ತಾವೆ ದಿನಾಂಕ:9-9-2010.

**ಪ್ರಸ್ತಾವನೆ:**

ಬಿಇಎಂಎಲ್ ಬಳಕೆದಾರರ ಸಹಕಾರ ಸಂಘ ನಿ., ಕೆಜಿಎಫ್, ಬಂಗಾರಪೇಟೆ ತಾಲ್ಲೂಕು ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಇವರ ಆದೇಶ ಸಂಖ್ಯೆ: ಎಆರ್‌ಕೆ/21/69-70 ದಿನಾಂಕ:18-6-1969 ರಂತೆ ನೋಂದಣಿಯಾಗಿರುತ್ತದೆ. ಈ ಸಹಕಾರ ಸಂಘವು ಉದ್ದೇಶಿತ ಬೈಲಾ, ಸಹಕಾರ ಸಂಘಗಳ ಕಾಯ್ದೆ ರೀತ್ಯಾ ಹಾಗೂ ಸಂಘದ ಸದಸ್ಯರ ಹಿತದೃಷ್ಟಿಯಿಂದ ಸಂಘವು ಕಾರ್ಯನಿರ್ವಹಿಸದೆ, ಕೆಲವು ವರ್ಷಗಳಿಂದ ಸ್ಥಗಿತಗೊಂಡ ಪ್ರಯುಕ್ತ ಈ ಕಛೇರಿಯ ಉಲ್ಲೇಖ (1)ರ ಆದೇಶದಲ್ಲಿ ಈ ಸಂಘವನ್ನು ಋಣಸಮಾಪನೆಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಬಂಗಾರಪೇಟೆ ಇವರನ್ನು ಸಮಾಪನಾಧಿಕಾರಿನ್ನಾಗಿ ನೇಮಿಸಲಾಗಿತ್ತು. ಸಮಾಪನಾಧಿಕಾರಿಗಳು ಸಮಾಪನಾ ಸಹಕಾರ ಸಂಘದ ಆಸ್ತಿ ಮತ್ತು ಜವಾಬ್ದಾರಿಯನ್ನು ಶೂನ್ಯಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಬಂಗಾರಪೇಟೆ ರವರು ಸಮಾಪನಾ ಸಹಕಾರ ಸಂಘದ ನೊಂದಣಿ ರದ್ಧತಿ ಮಾಡಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸಹಕಾರ ಅಭಿವೃದ್ಧಿ ಅಧಿಕಾರಿ, ಬಂಗಾರಪೇಟೆ ರವರು ಸಲ್ಲಿಸಿರುವ ಪ್ರಸ್ತಾವೆಯನ್ನು ಪರಿಶೀಲಿಸಿ, ಸಹಕಾರ ಸಂಘದ ಆಸ್ತಿ-ಜವಾಬ್ದಾರಿಗಳು ಶೂನ್ಯವಾಗಿರುವುದನ್ನು ಖಚಿತಪಡಿಸಿ, ಸಂಘದ ಸದಸ್ಯರಿಗೆ ಅಥವಾ ಸಾರ್ವಜನಿಕರಿಗೆ ಈ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ

ಯಾವುದೇ ರೀತಿಯ ಪ್ರಯೋಜನ ಇರುವುದಿಲ್ಲವೆಂದು ಅಭಿಪ್ರಾಯಿಸಿ, ಋಣ ಸಮಾಪನಾ ಸಹಕಾರ ಸಂಘವನ್ನು ಸಹಕಾರ ಕಾಯ್ದೆ ಕಲಂ 75 ರ ರೀತ್ಯಾ ನೋಂದಣಿ ರದ್ದತಿ ಮಾಡಲು, ಸಂಘವನ್ನು ವಿಸರ್ಜಿಸಲು ಶಿಫಾರಸ್ಸು ಮಾಡಿ ಪ್ರಸ್ತಾವೆಯನ್ನು ಈ ಕಛೇರಿಗೆ ಉಲ್ಲೇಖ (3) ರಂತೆ ಸಲ್ಲಿಸಿರುತ್ತಾರೆ.

ಸಮಾಪನಾಧಿಕಾರಿಗಳು ಸಮಾಪನಾ ಸಹಕಾರ ಸಂಘದ ಸಮಾಪನಾ ಕಾರ್ಯವನ್ನು ಪೂರ್ಣಗೊಳಿಸಿರುವುದರಿಂದ ಸಹಕಾರ ಅಭಿವೃದ್ಧಿ ಅಧಿಕಾರಿ, ಬಂಗಾರಪೇಟೆ ಇವರ ಶಿಫಾರಸ್ಸಿನೊಂದಿಗೆ ಸಲ್ಲಿಸಿರುವ ಸಮಾಪನಾ ಸಹಕಾರ ಸಂಘದ ನೊಂದಣಿ ರದ್ಧತಿ ಪ್ರಸ್ತಾವನೆ ಸೂಕ್ತವಾಗಿರುವುದರಿಂದ ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

**ನಂ:ಡಿಆರ್‌ಕೆ/ಎಲ್‌ಕ್ಯೂಡಿ/ಸಿಆರ್/24/2010-11, ದಿನಾಂಕ:30ನೇ ಸೆಪ್ಟೆಂಬರ್ 2010**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ/ಸಿಎಲ್‌ಎಂ/2001 ದಿನಾಂಕ:21-11-2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಕೆ.ಎಲ್.ನರಸಿಂಹಮೂರ್ತಿ, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಬಿಇಎಂಎಲ್ ಬಳಕೆದಾರರ ಸಹಕಾರ ಸಂಘ ನಿ., ಕೆಜಿಎಫ್, ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘದ ನೋಂದಣಿ ಸಂಖ್ಯೆ:ಎಆರ್‌ಕೆ/21/69-70 ದಿನಾಂಕ:18-6-1969 ನ್ನು ರದ್ದುಗೊಳಿಸಿ, ಸಂಘವನ್ನು ವಿಸರ್ಜಿಸಿ ಆದೇಶಿಸಿದ್ದೇನೆ.

ಈ ಆದೇಶದ ದಿನಾಂಕದಿಂದ ಸದರಿ ಸಂಘವು ಅಸ್ತಿತ್ವದಲ್ಲಿಲ್ಲದೆ ಸಂಪೂರ್ಣವಾಗಿ ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು.

ಈ ಆದೇಶವನ್ನು ಈ ದಿನ ಅಂದರೆ, ದಿನಾಂಕ:30-09-2010 ರಂದು ನನ್ನ ಸಹಿ ಹಾಗೂ ಈ ಕಛೇರಿ ಮೊಹರಿನೊಂದಿಗೆ ಹೊರಡಿಸಿದೆ.

**ಕೆ.ಎಲ್. ನರಸಿಂಹಮೂರ್ತಿ,**
ಸಹಕಾರ ಸಂಘಗಳ ಉಪ ನಿಬಂಧಕರು.
ಕೋಲಾರ ಜಿಲ್ಲೆ, ಕೋಲಾರ.

ಪಿಆರ್-131

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

**ವಿಷಯ:** ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕೆಂಪಾಪುರ, ಬಂಗಾರಪೇಟೆ ತಾಲ್ಲೂಕು ಈ ಸಂಘದ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ

**ಉಲ್ಲೇಖ:** 1) ಈ ಕಛೇರಿಯ ಆದೇಶದ ಸಂಖ್ಯೆ ಡಿಅರ್‌ಕೆ/ಎಲ್‌ಕ್ಯೂಡಿ/ಸಿಆರ್.1/2005-06 ದಿನಾಂಕ:12-1-2006.
2) ಕಛೇರಿಯಿಂದ ನೀಡಿರುವ ಪತ್ರಿಕಾ ಪ್ರಕಟಣೆ ದಿನಾಂಕ:8-6-2010 ಪತ್ರಿಕೆಯಲ್ಲಿ ಪ್ರಕಟಗೊಂಡ ದಿನಾಂಕ:9-6-2010.
3) ಸಹಕಾರ ಅಭಿವೃದ್ಧಿ ಅಧಿಕಾರಿ, ಬಂಗಾರಪೇಟೆ ತಾಲ್ಲೂಕುರವರ ಪ್ರಸ್ತಾವೆ ದಿನಾಂಕ:9-9-2010.

**ಪ್ರಸ್ತಾವನೆ:**

ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕೆಂಪಾಪುರ, ಬಂಗಾರಪೇಟೆ ತಾಲ್ಲೂಕು ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಇವರ ಆದೇಶ ಸಂಖ್ಯೆ: ಎಆರ್/ಆರ್‌ಜಿಎನ್/17274/89-90 ದಿನಾಂಕ:21-3-59 ರಂತೆ ನೋಂದಣಿಯಾಗಿರುತ್ತದೆ. ಈ ಸಹಕಾರ ಸಂಘವು ಉದ್ದೇಶಿತ ಬೈಲಾ, ಸಹಕಾರ ಸಂಘಗಳ ಕಾಯ್ದೆ ರೀತ್ಯಾ ಹಾಗೂ ಸಂಘದ ಸದಸ್ಯರ ಹಿತದೃಷ್ಟಿಯಿಂದ ಸಂಘವು ಕಾರ್ಯನಿರ್ವಹಿಸದೆ, ಕೆಲವು ವರ್ಷಗಳಿಂದ ಸ್ಥಗಿತಗೊಂಡ ಪ್ರಯುಕ್ತ, ಈ ಕಛೇರಿಯ ಉಲ್ಲೇಖ (1)ರ ಆದೇಶದಲ್ಲಿ ಈ ಸಂಘವನ್ನು ಋಣಸಮಾಪನೆಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಬಂಗಾರಪೇಟೆ ಇವರನ್ನು ಸಮಾಪನಾಧಿಕಾರಿನ್ನಾಗಿ ನೇಮಿಸಲಾಗಿತ್ತು. ಸಮಾಪನಾಧಿಕಾರಿಗಳು ಸಮಾಪನಾ ಸಹಕಾರ ಸಂಘದ ಆಸ್ತಿ ಮತ್ತು ಜವಾಬ್ದಾರಿಯನ್ನು ಶೂನ್ಯಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಬಂಗಾರಪೇಟೆ ರವರು ಸಮಾಪನಾ ಸಹಕಾರ ಸಂಘದ ನೊಂದಣಿ ರದ್ಧತಿ ಮಾಡಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸಹಕಾರ ಅಭಿವೃದ್ಧಿ ಅಧಿಕಾರಿ, ಬಂಗಾರಪೇಟೆ ರವರು ಸಲ್ಲಿಸಿರುವ ಪ್ರಸ್ತಾವೆಯನ್ನು ಪರಿಶೀಲಿಸಿ, ಸಹಕಾರ ಸಂಘದ ಆಸ್ತಿ-ಜವಾಬ್ದಾರಿಗಳು ಶೂನ್ಯವಾಗಿರುವುದನ್ನು ಖಚಿತಪಡಿಸಿ, ಸಂಘದ ಸದಸ್ಯರಿಗೆ ಅಥವಾ ಸಾರ್ವಜನಿಕರಿಗೆ ಈ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಯಾವುದೇ ರೀತಿಯ ಪ್ರಯೋಜನ ಇರುವುದಿಲ್ಲವೆಂದು ಅಭಿಪ್ರಾಯಿಸಿ, ಋಣ ಸಮಾಪನಾ ಸಹಕಾರ ಸಂಘವನ್ನು ಸಹಕಾರ ಕಾಯ್ದೆ ಕಲಂ 75 ರ ರೀತ್ಯಾ ನೋಂದಣಿ ರದ್ದತಿ ಮಾಡಲು, ಸಂಘವನ್ನು ವಿಸರ್ಜಿಸಲು ಶಿಫಾರಸ್ಸು ಮಾಡಿ ಪ್ರಸ್ತಾವೆಯನ್ನು ಈ ಕಛೇರಿಗೆ ಉಲ್ಲೇಖ (3) ರಂತೆ ಸಲ್ಲಿಸಿರುತ್ತಾರೆ.

ಸಮಾಪನಾಧಿಕಾರಿಗಳು ಸಮಾಪನಾ ಸಹಕಾರ ಸಂಘದ ಸಮಾಪನಾ ಕಾರ್ಯವನ್ನು ಪೂರ್ಣಗೊಳಿಸಿರುವುದರಿಂದ ಸಹಕಾರ ಅಭಿವೃದ್ಧಿ ಅಧಿಕಾರಿ, ಬಂಗಾರಪೇಟೆ ಇವರ ಶಿಫಾರಸ್ಸಿನೊಂದಿಗೆ ಸಲ್ಲಿಸಿರುವ ಸಮಾಪನಾ ಸಹಕಾರ ಸಂಘದ ನೊಂದಣಿ ರದ್ಧತಿ ಪ್ರಸ್ತಾವನೆ ಸೂಕ್ತವಾಗಿರುವುದರಿಂದ ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

**ನಂ:ಡಿಆರ್‌ಕೆ/ಎಲ್‌ಕ್ಯೂಡಿ/ಸಿಆರ್/23/2010-11, ದಿನಾಂಕ:30ನೇ ಸೆಪ್ಟೆಂಬರ್ 2010**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ/ಸಿಎಲ್‌ಎಂ/2001 ದಿನಾಂಕ:21-11-2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಕೆ.ಎಲ್.ನರಸಿಂಹಮೂರ್ತಿ, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕೆಂಪಾಪುರ, ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘದ ನೋಂದಣಿ ಸಂಖ್ಯೆ: ಎಆರ್/ಆರ್‌ಜಿಎನ್/17274/89-90 ದಿನಾಂಕ:21-3-59ನ್ನು ರದ್ದುಗೊಳಿಸಿ, ಸಂಘವನ್ನು ವಿಸರ್ಜಿಸಿ ಆದೇಶಿಸಿದ್ದೇನೆ.

ಈ ಆದೇಶದ ದಿನಾಂಕದಿಂದ ಸದರಿ ಸಂಘವು ಅಸ್ತಿತ್ವದಲ್ಲಿಲ್ಲದೆ ಸಂಪೂರ್ಣವಾಗಿ ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು.

ಈ ಆದೇಶವನ್ನು ಈ ದಿನ ಅಂದರೆ, ದಿನಾಂಕ:30–09–2010 ರಂದು ನನ್ನ ಸಹಿ ಹಾಗೂ ಈ ಕಛೇರಿ ಮೊಹರಿನೊಂದಿಗೆ ಹೊರಡಿಸಿದೆ.

**ಕೆ.ಎಲ್. ನರಸಿಂಹಮೂರ್ತಿ,**
ಸಹಕಾರ ಸಂಘಗಳ ಉಪ ನಿಬಂಧಕರು.
ಕೋಲಾರ ಜಿಲ್ಲೆ, ಕೋಲಾರ.

ಪಿಆರ್–132

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

**ವಿಷಯ:** ಹಾಲು ಉತ್ಪಾದಕರ ಸಹಕಾರ ಸಂಘ ನಿ., ಎಂ.ಕೊತ್ತೂರು, ಬಂಗಾರಪೇಟೆ ತಾಲ್ಲೂಕು ಈ ಸಂಘದ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ

**ಉಲ್ಲೇಖ:** 1) ಈ ಕಛೇರಿಯ ಆದೇಶದ ಸಂಖ್ಯೆ ಡಿಅರ್‌ಕೆ/ಎಲ್‌ಕ್ಯೂಡಿ/ಸಿಆರ್.24/2005–06 ದಿನಾಂಕ:12–1–2006.
2) ಕಛೇರಿಯಿಂದ ನೀಡಿರುವ ಪತ್ರಿಕಾ ಪ್ರಕಟಣೆ ದಿನಾಂಕ:8–6–2010 ಪತ್ರಿಕೆಯಲ್ಲಿ ಪ್ರಕಟಗೊಂಡ ದಿನಾಂಕ:9–6–2010.
3) ಸಹಕಾರ ಅಭಿವೃದ್ಧಿ ಅಧಿಕಾರಿ, ಬಂಗಾರಪೇಟೆ ತಾಲ್ಲೂಕುರವರ ಪ್ರಸ್ತಾವೆ ದಿನಾಂಕ:9–9–2010.

**ಪ್ರಸ್ತಾವನೆ:**

ಹಾಲು ಉತ್ಪಾದಕರ ಸಹಕಾರ ಸಂಘ ನಿ., ಎಂ.ಕೊತ್ತೂರು, ಬಂಗಾರಪೇಟೆ ತಾಲ್ಲೂಕು ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಇವರ ಆದೇಶ ಸಂಖ್ಯೆ: ಎಆರ್‌ಕೆ/ಬಿ/ಸಿಆರ್/79/ನೋಂ/17269/89–90 ದಿನಾಂಕ:16–3–1990 ರಂತೆ ನೋಂದಣಿಯಾಗಿರುತ್ತದೆ. ಈ ಸಹಕಾರ ಸಂಘವು ಉದ್ದೇಶಿತ ಬೈಲಾ, ಸಹಕಾರ ಸಂಘಗಳ ಕಾಯ್ದೆ ರೀತ್ಯಾ ಹಾಗೂ ಸಂಘದ ಸದಸ್ಯರ ಹಿತದೃಷ್ಟಿಯಿಂದ ಸಂಘವು ಕಾರ್ಯನಿರ್ವಹಿಸದೆ, ಕೆಲವು ವರ್ಷಗಳಿಂದ ಸ್ಥಗಿತಗೊಂಡ ಪ್ರಯುಕ್ತ ಈ ಕಛೇರಿಯ ಉಲ್ಲೇಖ (1)ರ ಆದೇಶದಲ್ಲಿ ಈ ಸಂಘವನ್ನು ಋಣಸಮಾಪನೆಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಬಂಗಾರಪೇಟೆ ಇವರನ್ನು ಸಮಾಪನಾಧಿಕಾರಿನ್ನಾಗಿ ನೇಮಿಸಲಾಗಿತ್ತು. ಸಮಾಪನಾಧಿಕಾರಿಗಳು ಸಮಾಪನಾ ಸಹಕಾರ ಸಂಘದ ಆಸ್ತಿ ಮತ್ತು ಜವಾಬ್ದಾರಿಯನ್ನು ಶೂನ್ಯಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಬಂಗಾರಪೇಟೆ ರವರು ಸಮಾಪನಾ ಸಹಕಾರ ಸಂಘದ ನೊಂದಣಿ ರದ್ಧತಿ ಮಾಡಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸಹಕಾರ ಅಭಿವೃದ್ಧಿ ಅಧಿಕಾರಿ, ಬಂಗಾರಪೇಟೆ ರವರು ಸಲ್ಲಿಸಿರುವ ಪ್ರಸ್ತಾವೆಯನ್ನು ಪರಿಶೀಲಿಸಿ, ಸಹಕಾರ ಸಂಘದ ಆಸ್ತಿ–ಜವಾಬ್ದಾರಿಗಳು ಶೂನ್ಯವಾಗಿರುವುದನ್ನು ಖಚಿತಪಡಿಸಿ, ಸಂಘದ ಸದಸ್ಯರಿಗೆ ಅಥವಾ ಸಾರ್ವಜನಿಕರಿಗೆ ಈ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಯಾವುದೇ ರೀತಿಯ ಪ್ರಯೋಜನ ಇರುವುದಿಲ್ಲವೆಂದು ಅಭಿಪ್ರಾಯಿಸಿ, ಋಣ ಸಮಾಪನಾ ಸಹಕಾರ ಸಂಘವನ್ನು ಸಹಕಾರ ಕಾಯ್ದೆ ಕಲಂ 75 ರ ರೀತ್ಯಾ ನೋಂದಣಿ ರದ್ದತಿ ಮಾಡಲು, ಸಂಘವನ್ನು ವಿಸರ್ಜಿಸಲು ಶಿಫಾರಸ್ಸು ಮಾಡಿ ಪ್ರಸ್ತಾವೆಯನ್ನು ಈ ಕಛೇರಿಗೆ ಉಲ್ಲೇಖ (3) ರಂತೆ ಸಲ್ಲಿಸಿರುತ್ತಾರೆ.

ಸಮಾಪನಾಧಿಕಾರಿಗಳು ಸಮಾಪನಾ ಸಹಕಾರ ಸಂಘದ ಸಮಾಪನಾ ಕಾರ್ಯವನ್ನು ಪೂರ್ಣಗೊಳಿಸಿರುವುದರಿಂದ ಸಹಕಾರ ಅಭಿವೃದ್ಧಿ ಅಧಿಕಾರಿ, ಬಂಗಾರಪೇಟೆ ಇವರ ಶಿಫಾರಸ್ಸಿನೊಂದಿಗೆ ಸಲ್ಲಿಸಿರುವ ಸಮಾಪನಾ ಸಹಕಾರ ಸಂಘದ ನೊಂದಣಿ ರದ್ಧತಿ ಪ್ರಸ್ತಾವನೆ ಸೂಕ್ತವಾಗಿರುವುದರಿಂದ ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

**ನಂ:ಡಿಆರ್‌ಕೆ/ಎಲ್‌ಕ್ಯೂಡಿ/ಸಿಆರ್/22/2010–11, ದಿನಾಂಕ:30ನೇ ಸೆಪ್ಟೆಂಬರ್ 2010**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ/ ಸಿಎಲ್ಎಂ/2001 ದಿನಾಂಕ:21–11–2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಕೆ.ಎಲ್.ನರಸಿಂಹಮೂರ್ತಿ, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಹಾಲು ಉತ್ಪಾದಕರ ಸಹಕಾರ ಸಂಘ ನಿ., ಎಂ.ಕೊತ್ತೂರು, ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘದ ನೋಂದಣಿ ಸಂಖ್ಯೆ: ಎಆರ್‌ಕೆ/ಬಿ/ಸಿಆರ್/79/ನೋಂ/17269/89–90 ದಿನಾಂಕ:16–3–1990 ರದ್ದುಗೊಳಿಸಿ, ಸಂಘವನ್ನು ವಿಸರ್ಜಿಸಿ ಆದೇಶಿಸಿದ್ದೇನೆ.

ಈ ಆದೇಶದ ದಿನಾಂಕದಿಂದ ಸದರಿ ಸಂಘವು ಅಸ್ತಿತ್ವದಲ್ಲಿಲ್ಲದೆ ಸಂಪೂರ್ಣವಾಗಿ ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು.

ಈ ಆದೇಶವನ್ನು ಈ ದಿನ ಅಂದರೆ, ದಿನಾಂಕ:30–09–2010 ರಂದು ನನ್ನ ಸಹಿ ಹಾಗೂ ಈ ಕಛೇರಿ ಮೊಹರಿನೊಂದಿಗೆ ಹೊರಡಿಸಿದೆ.

**ಕೆ.ಎಲ್. ನರಸಿಂಹಮೂರ್ತಿ,**
ಸಹಕಾರ ಸಂಘಗಳ ಉಪ ನಿಬಂಧಕರು.
ಕೋಲಾರ ಜಿಲ್ಲೆ, ಕೋಲಾರ.

ಪಿಆರ್–133

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

**ವಿಷಯ:** ಜ್ಯೋತಿನಗರ ಎಣ್ಣೆ ಕೈಗಾರಿಕಾ ಸಹಕಾರ ಸಂಘ ನಿ., ಶಿವಾರಪಟ್ಟಣ, ಮಾಲೂರು ತಾಲ್ಲೂಕು ಈ ಸಂಘದ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ

**ಉಲ್ಲೇಖ:** 1) ಈ ಕಛೇರಿಯ ಆದೇಶದ ಸಂಖ್ಯೆ ಡಿಅರ್‌ಕೆ/ಎಲ್‌ಕ್ಯೂಡಿ/ಸಿಆರ್. /85–86 ದಿನಾಂಕ:16–6–85.
2) ಕಛೇರಿಯಿಂದ ನೀಡಿರುವ ಪತ್ರಿಕಾ ಪ್ರಕಟಣೆ ದಿನಾಂಕ:8–6–2010 ಪತ್ರಿಕೆಯಲ್ಲಿ ಪ್ರಕಟಗೊಂಡ ದಿನಾಂಕ:9–6–2010.
3) ಸಹಕಾರ ಅಭಿವೃದ್ಧಿ ಅಧಿಕಾರಿ, ಮಾಲೂರು ತಾಲ್ಲೂಕುರವರ ಪ್ರಸ್ತಾವೆ ದಿನಾಂಕ:30–9–2010.

**ಪ್ರಸ್ತಾವನೆ:**

ಜ್ಯೋತಿನಗರ ಎಣ್ಣೆ ಕೈಗಾರಿಕಾ ಸಹಕಾರ ಸಂಘ ನಿ., ಶಿವಾರಪಟ್ಟಣ, ಮಾಲೂರು ತಾಲ್ಲೂಕು ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಇವರ ಆದೇಶ ಸಂಖ್ಯೆ: ಎಆರ್/49/ಯೋ.ಸಿಆರ್.246 ದಿನಾಂಕ:15–4–1949 ರಂತೆ ನೋಂದಣಿಯಾಗಿರುತ್ತದೆ. ಈ ಸಹಕಾರ ಸಂಘವು ಉದ್ದೇಶಿತ ಬೈಲಾ, ಸಹಕಾರ ಸಂಘಗಳ ಕಾಯ್ದೆ ರೀತ್ಯಾ ಹಾಗೂ ಸಂಘದ ಸದಸ್ಯರ ಹಿತದೃಷ್ಟಿಯಿಂದ ಸಂಘವು ಕಾರ್ಯನಿರ್ವಹಿಸದೆ, ಕೆಲವು ವರ್ಷಗಳಿಂದ ಸ್ಥಗಿತಗೊಂಡ ಪ್ರಯುಕ್ತ ಈ ಕಛೇರಿಯ ಉಲ್ಲೇಖ (1)ರ ಆದೇಶದಲ್ಲಿ ಈ ಸಂಘವನ್ನು ಋಣಸಮಾಪನೆಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಮಾಲೂರು ಇವರನ್ನು ಸಮಾಪನಾಧಿಕಾರಿನ್ನಾಗಿ ನೇಮಿಸಲಾಗಿತ್ತು. ಸಮಾಪನಾಧಿಕಾರಿಗಳು ಸಮಾಪನಾ ಸಹಕಾರ ಸಂಘದ ಆಸ್ತಿ ಮತ್ತು ಜವಾಬ್ದಾರಿಯನ್ನು ಶೂನ್ಯಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಮಾಲೂರು ರವರು ಸಮಾಪನಾ ಸಹಕಾರ ಸಂಘದ ನೊಂದಣಿ ರದ್ಧತಿ ಮಾಡಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸಹಕಾರ ಅಭಿವೃದ್ಧಿ ಅಧಿಕಾರಿ, ಮಾಲೂರು ರವರು ಸಲ್ಲಿಸಿರುವ ಪ್ರಸ್ತಾವೆಯನ್ನು ಪರಿಶೀಲಿಸಿ, ಸಹಕಾರ ಸಂಘದ ಆಸ್ತಿ–ಜವಾಬ್ದಾರಿಗಳು ಶೂನ್ಯವಾಗಿರುವುದನ್ನು ಖಚಿತಪಡಿಸಿ, ಸಂಘದ ಸದಸ್ಯರಿಗೆ ಅಥವಾ ಸಾರ್ವಜನಿಕರಿಗೆ ಈ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಯಾವುದೇ ರೀತಿಯ ಪ್ರಯೋಜನ ಇರುವುದಿಲ್ಲವೆಂದು ಅಭಿಪ್ರಾಯಿಸಿ, ಋಣ ಸಮಾಪನಾ ಸಹಕಾರ ಸಂಘವನ್ನು ಸಹಕಾರ ಕಾಯ್ದೆ ಕಲಂ 75 ರ ರೀತ್ಯಾ ನೋಂದಣಿ ರದ್ದತಿ ಮಾಡಲು, ಸಂಘವನ್ನು ವಿಸರ್ಜಿಸಲು ಶಿಫಾರಸ್ಸು ಮಾಡಿ ಪ್ರಸ್ತಾವೆಯನ್ನು ಈ ಕಛೇರಿಗೆ ಉಲ್ಲೇಖ (3) ರಂತೆ ಸಲ್ಲಿಸಿರುತ್ತಾರೆ.

ಸಮಾಪನಾಧಿಕಾರಿಗಳು ಸಮಾಪನಾ ಸಹಕಾರ ಸಂಘದ ಸಮಾಪನಾ ಕಾರ್ಯವನ್ನು ಪೂರ್ಣಗೊಳಿಸಿರುವುದರಿಂದ ಸಹಕಾರ ಅಭಿವೃದ್ಧಿ ಅಧಿಕಾರಿ, ಮಾಲೂರು ಇವರ ಶಿಫಾರಸ್ಸಿನೊಂದಿಗೆ ಸಲ್ಲಿಸಿರುವ ಸಮಾಪನಾ ಸಹಕಾರ ಸಂಘದ ನೊಂದಣಿ ರದ್ಧತಿ ಪ್ರಸ್ತಾವನೆ ಸೂಕ್ತವಾಗಿರುವುದರಿಂದ ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

**ನಂ:ಡಿಆರ್‌ಕೆ/ಎಲ್‌ಕ್ಯೂಡಿ/ಸಿಆರ್/9/2005–06, ದಿನಾಂಕ:30ನೇ ಸೆಪ್ಟೆಂಬರ್ 2010**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ/ಸಿಎಲ್‌ಎಂ/2001 ದಿನಾಂಕ:21–11–2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಕೆ.ಎಲ್.ನರಸಿಂಹಮೂರ್ತಿ, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಜ್ಯೋತಿನಗರ ಎಣ್ಣೆ ಕೈಗಾರಿಕಾ ಸಹಕಾರ ಸಂಘ ನಿ., ಶಿವಾರಪಟ್ಟಣ, ಮಾಲೂರು ತಾಲ್ಲೂಕು ಈ ಸಹಕಾರ ಸಂಘದ ನೋಂದಣಿ ಸಂಖ್ಯೆ: ಎಆರ್/49/ಯೋ.ಸಿಆರ್.246 ದಿನಾಂಕ:15–4–1949 ನ್ನು ರದ್ದುಗೊಳಿಸಿ, ಸಂಘವನ್ನು ವಿಸರ್ಜಿಸಿ ಆದೇಶಿಸಿದ್ದೇನೆ.

ಈ ಆದೇಶದ ದಿನಾಂಕದಿಂದ ಸದರಿ ಸಂಘವು ಅಸ್ತಿತ್ವದಲ್ಲಿಲ್ಲದೆ ಸಂಪೂರ್ಣವಾಗಿ ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು.

ಈ ಆದೇಶವನ್ನು ಈ ದಿನ ಅಂದರೆ, ದಿನಾಂಕ:30–09–2010 ರಂದು ನನ್ನ ಸಹಿ ಹಾಗೂ ಈ ಕಛೇರಿ ಮೊಹರಿನೊಂದಿಗೆ ಹೊರಡಿಸಿದೆ.

**ಕೆ.ಎಲ್. ನರಸಿಂಹಮೂರ್ತಿ,**
ಸಹಕಾರ ಸಂಘಗಳ ಉಪ ನಿಬಂಧಕರು.
ಕೋಲಾರ ಜಿಲ್ಲೆ, ಕೋಲಾರ.

ಪಿಆರ್–134

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

**ವಿಷಯ:** ಬಿಜಿಎಂಎಲ್ ಎಸ್.ಸಿ./ಎಸ್.ಟಿ ಸ್ಯಾನಿಟರಿ ಲೇಬರ್ ಸಹಕಾರ ಸಂಘ ನಿ., ಕೆಜಿಎಫ್, ಬಂಗಾರಪೇಟೆ ತಾಲ್ಲೂಕು ಈ ಸಂಘದ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ

**ಉಲ್ಲೇಖ:** 1) ಈ ಕಛೇರಿಯ ಆದೇಶದ ಸಂಖ್ಯೆ ಡಿಆರ್‌ಕೆ/ಎಲ್‌ಕ್ಯೂಡಿ/ಸಿಆರ್.4/2007–08 ದಿನಾಂಕ:21–2–2008

2) ಕಛೇರಿಯಿಂದ ನೀಡಿರುವ ಪತ್ರಿಕಾ ಪ್ರಕಟಣೆ ದಿನಾಂಕ:8–6–2010 ಪತ್ರಿಕೆಯಲ್ಲಿ ಪ್ರಕಟಗೊಂಡ ದಿನಾಂಕ:9–6–2010.

3) ಸಹಕಾರ ಅಭಿವೃದ್ಧಿ ಅಧಿಕಾರಿ, ಬಂಗಾರಪೇಟೆ ತಾಲ್ಲೂಕುರವರ ಪ್ರಸ್ತಾವೆ ದಿನಾಂಕ:9–9–2010.

**ಪ್ರಸ್ತಾವನೆ:**

ಬಿಜಿಎಂಎಲ್ ಎಸ್.ಸಿ./ಎಸ್.ಟಿ ಸ್ಯಾನಿಟರಿ ಲೇಬರ್ ಸಹಕಾರ ಸಂಘ ನಿ., ಕೆಜಿಎಫ್, ಬಂಗಾರಪೇಟೆ ತಾಲ್ಲೂಕು ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಇವರ ಆದೇಶ ಸಂಖ್ಯೆ: ಎಆರ್/49/ಯೋ.ಸಿಆರ್.190/ನೊಂ25677/98–99 ದಿನಾಂಕ:2–11–1988 ರಂತೆ ನೋಂದಣಿಯಾಗಿರುತ್ತದೆ. ಈ ಸಹಕಾರ ಸಂಘವು ಉದ್ದೇಶಿತ ಬೈಲಾ, ಸಹಕಾರ ಸಂಘಗಳ ಕಾಯ್ದೆ ರೀತ್ಯಾ ಹಾಗೂ ಸಂಘದ ಸದಸ್ಯರ ಹಿತದೃಷ್ಟಿಯಿಂದ ಸಂಘವು ಕಾರ್ಯನಿರ್ವಹಿಸದೆ, ಕೆಲವು ವರ್ಷಗಳಿಂದ ಸ್ಥಗಿತಗೊಂಡ ಪ್ರಯುಕ್ತ ಈ ಕಛೇರಿಯ ಉಲ್ಲೇಖ (1)ರ ಆದೇಶದಲ್ಲಿ ಈ ಸಂಘವನ್ನು ಋಣಸಮಾಪನೆಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಬಂಗಾರಪೇಟೆ ಇವರನ್ನು ಸಮಾಪನಾಧಿಕಾರಿನ್ನಾಗಿ ನೇಮಿಸಲಾಗಿತ್ತು. ಸಮಾಪನಾಧಿಕಾರಿಗಳು ಸಮಾಪನಾ ಸಹಕಾರ ಸಂಘದ ಆಸ್ತಿ ಮತ್ತು ಜವಾಬ್ದಾರಿಯನ್ನು ಶೂನ್ಯಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಬಂಗಾರಪೇಟೆ ರವರು ಸಮಾಪನಾ ಸಹಕಾರ ಸಂಘದ ನೊಂದಣಿ ರದ್ಧತಿ ಮಾಡಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸಹಕಾರ ಅಭಿವೃದ್ಧಿ ಅಧಿಕಾರಿ, ಬಂಗಾರಪೇಟೆ ರವರು ಸಲ್ಲಿಸಿರುವ ಪ್ರಸ್ತಾವೆಯನ್ನು ಪರಿಶೀಲಿಸಿ, ಸಹಕಾರ ಸಂಘದ ಆಸ್ತಿ–ಜವಾಬ್ದಾರಿಗಳು ಶೂನ್ಯವಾಗಿರುವುದನ್ನು ಖಚಿತಪಡಿಸಿ, ಸಂಘದ ಸದಸ್ಯರಿಗೆ ಅಥವಾ ಸಾರ್ವಜನಿಕರಿಗೆ ಈ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಯಾವುದೇ ರೀತಿಯ ಪ್ರಯೋಜನ ಇರುವುದಿಲ್ಲವೆಂದು ಅಭಿಪ್ರಾಯಿಸಿ, ಋಣ ಸಮಾಪನಾ ಸಹಕಾರ ಸಂಘವನ್ನು ಸಹಕಾರ ಕಾಯ್ದೆ ಕಲಂ 75 ರ ರೀತ್ಯಾ ನೋಂದಣಿ ರದ್ದತಿ ಮಾಡಲು, ಸಂಘವನ್ನು ವಿಸರ್ಜಿಸಲು ಶಿಫಾರಸ್ಸು ಮಾಡಿ ಪ್ರಸ್ತಾವೆಯನ್ನು ಈ ಕಛೇರಿಗೆ ಉಲ್ಲೇಖ (3) ರಂತೆ ಸಲ್ಲಿಸಿರುತ್ತಾರೆ.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರ ಕಚೇರಿ ತುಮಕೂರು ಜಿಲ್ಲೆ ತುಮಕೂರು
### 2ನೇ ಮಹಡಿ, ಮಿನಿವಿಧಾನಸೌಧ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು

**ವಿಷಯ:** ಸ್ಥಗಿತಗೊಂಡಿರುವ ಮದೀನ ಅಲ್ಪಸಂಖ್ಯಾತರ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ., ತಿಪಟೂರು, ತಿಪಟೂರು ತಾಲ್ಲೂಕು ಇದನ್ನು ಸಮಾಪನೆಗೊಳಿಸಿ ಆದೇಶ ನೀಡುವ ವಿಚಾರ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ ತಿಪಟೂರು ಇವರ ಪತ್ರದ ಸಂ:ಸನಿ:34/ಸಮಾಪನೆ:ಸಿಆರ್:16/2010–11 ದಿನಾಂಕ:23–7–2010.

2) ಸಂಯುಕ್ತ ಕರ್ನಾಟಕ/ಪ್ರಜಾಪ್ರಗತಿ ದಿನಪತ್ರಿಕೆ ಪ್ರಕಟಣೆ ದಿನಾಂಕ:20–2–2010 ಮತ್ತು ದಿನಾಂಕ:19–2–2010.

**ಪ್ರಸ್ತಾವನೆ:**

ಸ್ಥಗಿತಗೊಂಡಿರುವ ಮದೀನ ಅಲ್ಪಸಂಖ್ಯಾತರ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ., ತಿಪಟೂರು, ತಿಪಟೂರು ತಾಲ್ಲೂಕು ತುಮಕೂರು ಜಿಲ್ಲೆ ಈ ಸಹಕಾರ ಸಂಘವು ಕ್ರಮ ಸಂಖ್ಯೆ:ಸನಿ–34/ನೊಂದಣಿ/26816/2000–2001. ದಿನಾಂಕ:25–09–2000 ರಲ್ಲಿ ಸಹಾಯಕ ನಿಬಂಧಕರು ತಿಪಟೂರು ಉಪ–ವಿಭಾಗ ತಿಪಟೂರು ಇವರಿಂದ ನೊಂದಣಿಯಾಗಿರುತ್ತದೆ. ಇದರ ಆಡಳಿತ ವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯುಳ್ಳದ್ದಾಗಿರುತ್ತದೆ. ಸದರಿ ಸಂಘದ ಕಾರ್ಯಚಟುವಟಿಕೆಗಳು 10 ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಕಾರಣ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 72 (2) (ಬಿ) ಯ ಪ್ರಕಾರ ಸಂಘವನ್ನು ಸಮಾಪನೆಗೊಳಿಸಿ ಆದೇಶ ನೀಡುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು ತಿಪಟೂರು ಉಪವಿಭಾಗ ತಿಪಟೂರು ರವರು ಉಲ್ಲೇಖ (1) ರ ರೀತ್ಯಾ ಕೋರಿ ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ.

ಅದರಂತೆ ಸದರಿ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ, ಆಡಳಿತ ಮಂಡಳಿ ಆಸ್ತಿತ್ವದಲ್ಲಿಲ್ಲದ ಕಾರಣ ಉಲ್ಲೇಖ (2) ರ ರೀತ್ಯಾ ಪತ್ರಿಕಾ ಪ್ರಕಟಣೆ ನೀಡಿ, ಸಂಘದ ಸದಸ್ಯರ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಈ ಕಛೇರಿಗೆ ಸಲ್ಲಿಸಲು ತಿಳಿಸಲಾಗಿತ್ತು. ಆದರೆ ಈ ಸಂಬಂಧ ಸಂಘದ ಸದಸ್ಯರುಗಳಿಂದಾಗಲೀ, ಸಾರ್ವಜನಿಕರುಗಳಿಂದಾಗಲೀ, ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ. ಪ್ರಯುಕ್ತ ಸಂಘವನ್ನು ಮುಂದುವರಿಸಿಕೊಂಡು ಹೋಗಲು ಆಸಕ್ತಿ ಇಲ್ಲವೆಂದು ಅಭಿಪ್ರಾಯಪಡುತ್ತಾ, ಈ ಕೆಳಕಂಡಂತೆ ಆದೇಶ ನೀಡಿದೆ.

### ಆದೇಶ

**ನಂ. ಡಿಆರ್‌ಟಿ:ಎಲ್‌ಕ್ಯೂಡಿ:ಸಿಆರ್:09/2010–11, ದಿನಾಂಕ:10ನೇ ಡಿಸೆಂಬರ್ 2010**

ಆರ್. ಲೋಕೇಶ್, ಕೆ.ಸಿ.ಎಸ್. ಸಹಕಾರ ಸಂಘಗಳ ಉಪನಿಬಂಧಕರು ತುಮಕೂರು ಜಿಲ್ಲೆ ತುಮಕೂರು, ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 72(2)(ಬಿ) ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ/201/ಸಿಎಲ್‌ಎಂ/2008. ದಿನಾಂಕ:27–5–2010 ರಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ, ಮದೀನ ಅಲ್ಪಸಂಖ್ಯಾತರ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ., ತಿಪಟೂರು, ತಿಪಟೂರು ತಾಲ್ಲೂಕು ತುಮಕೂರು ಜಿಲ್ಲೆ ಇದನ್ನು ಸಮಾಪನೆಗೊಳಿಸಿ, ಸಹಕಾರ ಸಂಘಗಳ ನಿರೀಕ್ಷಕರು ತಿಪಟೂರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಚೇರಿ ತಿಪಟೂರು ಇವರನ್ನು ಋಣಸಮಾಪನಾಧಿಕಾರಿಯನ್ನಾಗಿ ನೇಮಕಮಾಡಿ ಆದೇಶಿಸಿರುತ್ತೇನೆ.

ಋಣಸಮಾಪನಾಧಿಕಾರಿಗಳು ಸಂಘದ ಪೂರ್ಣಪ್ರಭಾರವನ್ನು ಸಂಬಂಧಪಟ್ಟವರಿಂದ ವಹಿಸಿಕೊಂಡು ಪ್ರಭಾರ ಪಟ್ಟಿಯನ್ನು ಈ ಕಛೇರಿಗೆ ಸಲ್ಲಿಸಲು ತಿಳಿಸಿದೆ. ಹಾಗೂ ಸಂಘದ ಲೆಕ್ಕ ಪರಿಶೋಧನಾ ವರದಿಯಂತೆ ಅಥವಾ ಸಂಘದ ಆಸ್ತಿ–ಜವಾಬ್ದಾರಿ ತ:ಖ್ತೆಯ ರೀತ್ಯಾ ಆಸ್ತಿ–ಜವಾಬ್ದಾರಿಯನ್ನು ವಿಲೇವಾರಿ ಮಾಡಲು ಆದ್ಯತಾ ಪಟ್ಟಿಯ ಮೂರು ಪ್ರತಿಗಳನ್ನು ಈ ಕಛೇರಿಗೆ ಅನುಮೋದನೆಗೆ ಸಲ್ಲಿಸಿ, ಅನುಮೋದನೆ ಪಡೆದು ಆದ್ಯತೆ ಮೇರೆಗೆ ವಿಲೇವಾರಿಮಾಡಿ, ಸಂಘದ ನೊಂದಣಿ ರದ್ದತಿಗೆ ಪ್ರಸ್ತಾವೆಯನ್ನು ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಚೇರಿಯ ಮುದ್ರೆಯೊಂದಿಗೆ ದಿನಾಂಕ:10–12–2010 ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು.
ತುಮಕೂರು ಜಿಲ್ಲೆ, ತುಮಕೂರು

ಪಿಆರ್–72

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರ ಕಚೇರಿ ತುಮಕೂರು ಜಿಲ್ಲೆ ತುಮಕೂರು
### 2ನೇ ಮಹಡಿ, ಮಿನಿವಿಧಾನಸೌಧ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು

**ವಿಷಯ:** ಸ್ಥಗಿತಗೊಂಡಿರುವ ಮಾರುತಿ ಹರಿಜನ/ಗಿರಿಜನ ಬಳಕೆದಾರರ ಸಹಕಾರ ಸಂಘ ನಿ., ಬಿಸಲೇಹಳ್ಳಿ ತಿಪಟೂರು ತಾಲ್ಲೂಕು ಇದನ್ನು ಸಮಾಪನೆಗೊಳಿಸಿ ಆದೇಶ ನೀಡುವ ವಿಚಾರ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ ತಿಪಟೂರು ಇವರ ಪತ್ರದ ಸಂ:ಸನಿ:34/ಸಮಾಪನೆ:ಸಿಆರ್:18/2010–11 ದಿನಾಂಕ:9–8–2010.

2) ಸಂಯುಕ್ತ ಕರ್ನಾಟಕ/ಪ್ರಜಾಪ್ರಗತಿ ದಿನಪತ್ರಿಕೆ ಪ್ರಕಟಣೆ ದಿನಾಂಕ:20–2–2010 ಮತ್ತು ದಿನಾಂಕ:19–2–2010.

**ಪ್ರಸ್ತಾವನೆ:**

ಸ್ಥಗಿತಗೊಂಡಿರುವ ಮಾರುತಿ ಹರಿಜನ/ಗಿರಿಜನ ಬಳಕೆದಾರರ ಸಹಕಾರ ಸಂಘ ನಿ., ಬಿಸಲೇಹಳ್ಳಿ ತಿಪಟೂರು ತಾಲ್ಲೂಕು, ತುಮಕೂರು ಜಿಲ್ಲೆ ಈ ಸಹಕಾರ ಸಂಘವು ಕ್ರಮ ಸಂಖ್ಯೆ:ಸನಿ–34/ನೊಂದಣಿ/1823/1999–2000. ದಿನಾಂಕ:28–11–1999 ರಲ್ಲಿ ಸಹಾಯಕ ನಿಬಂಧಕರು ತಿಪಟೂರು ಉಪ–ವಿಭಾಗ ತಿಪಟೂರು ಇವರಿಂದ ನೊಂದಣಿಯಾಗಿರುತ್ತದೆ. ಇದರ ಆಡಳಿತ ವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯುಳ್ಳದ್ದಾಗಿರುತ್ತದೆ. ಸದರಿ ಸಂಘದ ಕಾರ್ಯಚಟುವಟಿಕೆಗಳು 2004–05 ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಕಾರಣ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 72 (2) (ಬಿ) ಯ ಪ್ರಕಾರ ಸಂಘವನ್ನು ಸಮಾಪನೆಗೊಳಿಸಿ ಆದೇಶ ನೀಡುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು ತಿಪಟೂರು ಉಪವಿಭಾಗ ತಿಪಟೂರು ರವರು ಉಲ್ಲೇಖ (1) ರ ರೀತ್ಯಾ ಕೋರಿ ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ.

ಅದರಂತೆ ಸದರಿ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ, ಆಡಳಿತ ಮಂಡಳಿ ಅಸ್ತಿತ್ವದಲ್ಲಿಲ್ಲದ ಕಾರಣ ಉಲ್ಲೇಖ (2) ರ ರೀತ್ಯಾ ಪತ್ರಿಕಾ ಪ್ರಕಟಣೆ ನೀಡಿ, ಸಂಘದ ಸದಸ್ಯರ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಈ ಕಛೇರಿಗೆ ಸಲ್ಲಿಸಲು ತಿಳಿಸಲಾಗಿತ್ತು. ಆದರೆ ಈ ಸಂಬಂಧ ಸಂಘದ ಸದಸ್ಯರುಗಳಿಂದಾಗಲೀ, ಸಾರ್ವಜನಿಕರಗಳಿಂದಾಗಲೀ, ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ. ಪ್ರಯುಕ್ತ ಸಂಘವನ್ನು ಮುಂದುವರಿಸಿಕೊಂಡು ಹೋಗಲು ಆಸಕ್ತಿ ಇಲ್ಲವೆಂದು ಅಭಿಪ್ರಾಯಪಡುತ್ತಾ, ಈ ಕೆಳಕಂಡಂತೆ ಆದೇಶ ನೀಡಿದೆ.

**ಆದೇಶ**

**ನಂ. ಡಿಆರ್‌ಟಿ/ಎಲ್‌ಕ್ಯೂಡಿ/ಸಿಆರ್/06/2010–11, ದಿನಾಂಕ:10ನೇ ಡಿಸೆಂಬರ್ 2010**

ಆರ್. ಲೋಕೇಶ್, ಕೆ.ಸಿ.ಎಸ್. ಸಹಕಾರ ಸಂಘಗಳ ಉಪನಿಬಂಧಕರು ತುಮಕೂರು ಜಿಲ್ಲೆ ತುಮಕೂರು, ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 72(2) (ಬಿ) ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ/201/ಸಿಎಲ್‌ಎಂ/2008. ದಿನಾಂಕ:27–5–2010 ರಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ, ಮಾರುತಿ ಹರಿಜನ/ಗಿರಿಜನ ಬಳಕೆದಾರರ ಸಹಕಾರ ಸಂಘ ನಿ., ಬಿಸಲೇಹಳ್ಳಿ ತಿಪಟೂರು ತಾಲ್ಲೂಕು ತುಮಕೂರು ಜಿಲ್ಲೆ ಇದನ್ನು ಸಮಾಪನೆಗೊಳಿಸಿ, ಸಹಕಾರ ಸಂಘಗಳ ನಿರೀಕ್ಷಕರು ತಿಪಟೂರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಚೇರಿ ತಿಪಟೂರು ಇವರನ್ನು ಋಣಸಮಾಪನಾಧಿಕಾರಿಯನ್ನಾಗಿ ನೇಮಕಮಾಡಿ ಆದೇಶಿಸಿರುತ್ತೇನೆ.

ಋಣಸಮಾಪನಾಧಿಕಾರಿಗಳು ಸಂಘದ ಪೂರ್ಣಪ್ರಭಾರವನ್ನು ಸಂಬಂಧಪಟ್ಟವರಿಂದ ವಹಿಸಿಕೊಂಡು ಪ್ರಭಾರ ಪಟ್ಟಿಯನ್ನು ಈ ಕಛೇರಿಗೆ ಸಲ್ಲಿಸಲು ತಿಳಿಸಿದೆ. ಹಾಗೂ ಸಂಘದ ಲೆಕ್ಕ ಪರಿಶೋಧನಾ ವರದಿಯಂತೆ ಅಥವಾ ಸಂಘದ ಆಸ್ತಿ–ಜವಾಬ್ದಾರಿ ತ:ಖ್ತೆಯ ರೀತ್ಯಾ ಆಸ್ತಿ–ಜವಾಬ್ದಾರಿಯನ್ನು ವಿಲೇವಾರಿ ಮಾಡಲು ಆದ್ಯತಾ ಪಟ್ಟಿಯ ಮೂರು ಪ್ರತಿಗಳನ್ನು ಈ ಕಛೇರಿಗೆ ಅನುಮೋದನೆಗೆ ಸಲ್ಲಿಸಿ, ಅನುಮೋದನೆ ಪಡೆದು ಆದ್ಯತೆ ಮೇರೆಗೆ ವಿಲೇವಾರಿಮಾಡಿ, ಸಂಘದ ನೊಂದಣಿ ರದ್ದತಿಗೆ ಪ್ರಸ್ತಾವೆಯನ್ನು ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಚೇರಿಯ ಮುದ್ರೆಯೊಂದಿಗೆ ದಿನಾಂಕ:10–12–2010 ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು.
ತುಮಕೂರು ಜಿಲ್ಲೆ, ತುಮಕೂರು

ಪಿಆರ್–73

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಛೇರಿ**

**ನಂ: ಡಿಆರ್‌ಡಿ:ಎಲ್‌ಕ್ಯೂಡಿ:ಸಿಆರ್:34/2010–11, ದಿನಾಂಕ:30ನೇ ಡಿಸೆಂಬರ್ 2010**

**ವಿಷಯ:** ಸ್ಥಗಿತಗೊಂಡಿರುವ ಗುಂಡೇರಿ ಹಾಲು ಉತ್ಪಾದಕರ ಸಹಕಾರ ಸಂಘ ನಿ. ಗುಂಡೇರಿ, ಹೊಳಲ್ಕೆರೆ ತಾಲ್ಲೂಕು ಇದನ್ನು 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಇವರ ಪತ್ರದ ಸಂ:ಸನಿ:30/ಸಮಾಪನೆ:ಸಿಆರ್:26/10–11 ದಿನಾಂಕ:11–11–2010.
2) ಈ ಕಛೇರಿಯ ಕಾರಣ ಕೇಳಿ ನೋಟೀಸು ಸಮ ಸಂಖ್ಯೆ ದಿನಾಂಕ: 16–11–2010.
3) ಡಿ ದರ್ಜೆ ನೌಕರರ ಹೊಳಲ್ಕೆರೆ ಇವರ ಪತ್ರ ದಿನಾಂಕ:20–12–2010.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಉಪ ವಿಭಾಗ, ಚಿತ್ರದುರ್ಗ ಇವರು ಉಲ್ಲೇಖ (1) ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಗುಂಡೇರಿ ಹಾಲು ಉತ್ಪಾದಕರ ಸಹಕಾರ ಸಂಘ ನಿ. ಗುಂಡೇರಿ, ಹೊಳಲ್ಕೆರೆ ತಾಲ್ಲೂಕು ಸಂಘದ ನೋಂದಣಿ ಸಂಖ್ಯೆ:ಸನಿ:30:48/ಆರ್‌ಜಿಎನ್/35221/2005–06 ದಿನಾಂಕ:02–09–2005 ಈ ಸಂಘದ ಕಾರ್ಯ ಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಹರಿಸುವಲ್ಲಿ ವಿಫಲವಾಗಿರುತ್ತಾರೆ ಮತ್ತು ಸಂಘವನ್ನು ಪುನ:ಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲವೆಂದು ಪ್ರಸ್ತಾವನೆ ಸಲ್ಲಿಸಿ, ಸಂಘವನ್ನು ಸಮಾಪನೆಗೊಳಿಸಲು ಕೋರಿರುತ್ತಾರೆ. ಈ ಬಗ್ಗೆ ಉಲ್ಲೇಖ (2) ರ ನೋಟೀಸನ್ನು ಈ ಕಛೇರಿಯಿಂದ ನೀಡಿದ್ದು, ಸಂಘದ ಆಡಳಿತ ಮಂಡಳಿಯವರಿಗೆ ನೋಟೀಸು ಜಾರಿಯಾದ ಬಗ್ಗೆ ಉಲ್ಲೇಖ (3) ರಲ್ಲಿ ಸ್ವೀಕೃತಿ ಈ ಕಛೇರಿಗೆ ತಲುಪಿದೆ, ಆದಾಗ್ಯೂ ಅವರು ಯಾವುದೇ ಸಮಜಾಯಿಷಿ ಅಥವಾ ಪ್ರತಿಕ್ರಿಯೆಯನ್ನು ನೀಡದೇ ನಿರುತ್ಸಾಹ ತೋರಿಸಿರುತ್ತಾರೆ. ಈ ಸಂಘದಿಂದ ಸಂಘದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ, ಇದರಿಂದ ಸಂಘವು ಪುನ:ಶ್ಚೇತನಗೊಳಿಸುವ ಹಂತವನ್ನು ಮೀರಿರುತ್ತದೆ. ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಅಭಿಪ್ರಾಯ ಪಟ್ಟು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**"ಆದೇಶ"**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ನಂ:ಸಿಓ:201:ಸಿಎಲ್‌ಎಂ:2008/ ಬೆಂಗಳೂರು ದಿನಾಂಕ:27–05–2010 ರ ಪ್ರಕಾರ ದತ್ತವಾದ ಅಧಿಕಾರದನ್ವಯ ಇಲ್ಯಾಸ್ ಉಲ್ಲಾ ಷರೀಫ್ ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ ಆದ ನಾನು ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಸ್ಥಗಿತಗೊಂಡಿರುವ ಗುಂಡೇರಿ ಹಾಲು ಉತ್ಪಾದಕರ ಸಹಕಾರ ಸಂಘ ನಿ. ಗುಂಡೇರಿ, ಹೊಳಲ್ಕೆರೆ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73 (1) ಅನ್ವಯ ಹಾಲು ವಿಸ್ತರಣಾಧಿಕಾರಿ, ಹೊಳಲ್ಕರೆ ತಾಲ್ಲೂಕು, ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73 (1) ಮತ್ತು 74 ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನಾಂಕ:30–12–2010 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು.
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ

ಪಿಆರ್–74